


# ಸಪ್ತಗಿರಿ

ತಿರುಮಲ ತಿರುಪತಿ ದೇವಸ್ಥಾನಗಳ ಮಾಸ ಪತ್ರಿಕೆ

ಫೆಬ್ರುವರಿ 1982

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

**1—11—81** ರಿಂದ **28—2—82** ವರೆಗೆ

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಆರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ (ಆರ್ಜಿತ)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
ರಾತ್ರಿ 8–00 ರಿಂದ 10–00 ವರೆಗೆ ಪೂಲಂಗಿ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು
,, 5–00 ರಿಂದ 7–00 ವರೆಗೆ ಅಭಿಷೇಕ (ಆರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ, ಬಲಿ, ಶಾತ್ತುಮೊರೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ತೋಮಾಲಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು.

3. ಸರ್ಕಾರ್ ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಪ್ಲವೋತ್ಸವ ಮಂಗಳವಾರದಲ್ಲಿ ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು.



ರಾಗ – ಶಂಕರಾಭರಣ      ತಾಳ – ಅಟ

ಏನ ಬೇಡಲಿ ನಿನ್ನ ಹರಿಯೇ ॥ ಪ ॥

ಏನ ಬೇಡಲಿ ನಿನ್ನ ಚಂಡಲ ಕಠಿಣನ
ಮೌನದಿಂದ ಮೋರೆ ಓರೆ ಮಾಡುವನ ॥ ಅ ಪ ॥

ಕರುಳುಹರಕನ – ಏನ ಬೇಡಲಿ
ತಿರಿದು ತಿಂಬುವನ ॥
ಕೊರಳ ಗೊಯ್ಕ ಅರಣ್ಯ ತಿರುಗುವವನ ಮೊ – ।
ಸರು ಬೆಣ್ಣೆ ಕದ್ದು ತಿಂಬುವನ. ॥ 1 ॥

ವಾಸ ಶೂನ್ಯನ – ಬೇಡಲೇನು ಶಕ್ತಿ –
ಬೀಸಿ ಸವರುವವನ
ಕಾಮವೀಸವನೆಲ್ಲ ನೀಸಲು ಮಾಡಿಟ್ಟು
ಕೇಸಕ್ಕಿ ಉಂಡುಂಡು ವಾಸಿಸುವವನ ॥ 2 ॥

ಬೇಡಿದರೆ ಕೊಡನ – ಮೋರೆ ನೋಡಿ
ಭಿಕ್ಷೆಯ ಹಿಡಿಯುದವನ !
ಬಡವರ ಕರೆತಂದು ಅಡಿಗೆ ಸೇರಿಸಿಕೊಂಡ
ಒಡೆಯ ಪುರಂದರ ವಿಠಲ ದೊರೆಯೆ ॥ 3 ॥

—ಪುರಂದರದಾಸರು



ಗೌರವ ಸಂಪಾದಕರು:
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಐ.ಎ.ಎಸ್.,

ಸಂಪಾದಕ:
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ:
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ ಪ್ರೆಸ್ ಕಾಂಪೌಂಡ್
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

---



**ಸಂಪುಟ 12] ಸಪ್ತಗಿರಿ ಫೆಬ್ರವರಿ 1982 [ಸಂಚಿಕೆ 9**

# ವಿಷಯಸೂಚಿ

## ಪರ್ಯಾಯ ಮಹೋತ್ಸವ

ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯ ಶ್ರೀ ಕೃಷ್ಣ ದೇವಾಲಯದ ಪೂಜಾವ್ಯವಸ್ಥೆಯ ನೇತೃ ವಿಚಾರಣೆಗೆ ಎರಡು ವರ್ಷಗಳ ಅವಧಿಯ ಅರ್ಚನದ ಪರ್ಯಾಯ ಪದ್ಧತಿ ನಡೆದಿದೆ. ಎರಡು ವರ್ಷಗಳ ಕೊನೆಗೆ ನೂತನ ಶ್ರೀ ಪಾದಂಗಳವರು ಪೂಜಾಧಿಕಾರವನ್ನು ಸ್ವೀಕರಿಸುವರು. ಕಾಣಿಯೂರು ಮಠದ ಶ್ರೀ ಶ್ರೀ ವಿದ್ಯಾವಾರಿಧಿ ತೀರ್ಥರು ಪರ್ಯಾಯ ಪೀಠಾರೋಹಣಗೈದರು.

ಪರ್ಯಾಯೋತ್ಸವದ ಸಲುವಾಗಿ ನಡೆದ ಅದ್ದೂರಿ ವಿಜೃಂಭಣೆಯ ಮೆರವಣಿಗೆಯಲ್ಲಿ ಮಹಾ ಭಾರತ ಕಥಾಚಿತ್ರಗಳ ಹಿಂದೆ ಮುಂದೆ ನೂರಾರು ಅಲಂಕೃತ ಆನೆಗಳು ಹಾಗೂ ಎತ್ತಿನ ಗಾಡಿ ಗಳಿದ್ದುವು. ಮಧ್ಯಭಾಗದಲ್ಲಿ ಶ್ರೀ ಶ್ರೀ ವಿದ್ಯಾ-ವಾರಿಧಿ ತೀರ್ಥರು ಪಲ್ಲಕ್ಕಿಯಲ್ಲಿ ತಮಗಾಗಿ ಕಾದು ನಿಂತಿದ್ದ ಅಸಂಖ್ಯ ಜನರನ್ನು ಹರಸುತ್ತ ಮುಂದುವರಿದರು.

ಪರ್ಯಾಯ ಪೀಠಾರೋಹಣ ಮಾಡಿದ ಶ್ರೀಗಳವರು ಹದಿನಾಲ್ಕು ಜನ ಪ್ರಮುಖ ಸಾರ್ವಜನಿಕರನ್ನು ಸನ್ಮಾನಿಸಿ, ಶ್ರೀ ಕೃಷ್ಣ ಮಠದ ಅಭಿವೃದ್ಧಿಗಾಗಿ ಸಾರ್ವಜನಿಕರ ನೆರವು ಅಗತ್ಯವೆಂದರು. ಸನ್ಮಾನಿತರಲ್ಲಿ ಕರ್ನಾಟಕ ರಾಜ್ಯದ ಅರ್ಥಮಂತ್ರಿ ವೀರಪ್ಪ ಮೊಯ್ಲಿ, ಚಿತ್ರನಟ ಡಾ॥ ರಾಜಕುಮಾರ್, ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ಡಿ. ವೀರೇಂದ್ರ ಹೆಗ್ಗಡೆ ಅವರುಗಳು ಮುಖ್ಯರು.



## ತಿರುಮಲೆಯಲ್ಲಿ ಪಾರ್ವೇಟ ಉತ್ಸವ

ತಿರುಮಲೆಯಲ್ಲಿ ಶ್ರೀ ವೇಂಕಟೇಶ್ವರಸ್ವಾಮಿ ಯವರ ಪಾರ್ವೇಟ ಉತ್ಸವಗಳು ವಿಶಿಷ್ಟವಾಗಿ ಈಚೆಗೆ ನಡೆದವು. ಮೇಲೆ ತೋರಿಸಲಾಗಿರುವಲ್ಲಿ ಸ್ವಾಮಿ ಹಾಗೂ ನಾಚ್ಚಿಯಾರರನ್ನು ಕಾಣಬಹುದು. ಕೆಳಗೆ ಪಾರ್ವೇಟ ಉತ್ಸವ ಮಂಟಪದ ಎದುರು ನಿಂತ ಜನಸ್ತೋಮದ ದೃಶ್ಯವಿದೆ.



## ಜನವರಿ ೧ ರಂದು ೧೨ ಲಕ್ಷ ರೂ॥ ಆಯ.

ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯದಲ್ಲಿ ಈ ಬಾರಿಯ ಜನವರಿ 1 ರಂದು ಹಿಂದೆಂದೂ ಕಾಣದಂತಹ ಜನ ಸಂದಣಿ ಇದ್ದಿತು ಆ ದಿನ ಹುಂಡಿ ಕಾಣಿಕೆ, ವಿಶೇಷ ದರ್ಶನ ಟಿಕೆಟ್, ಹಾಗೂ ಪ್ರಸಾದ ಮಾರಾಟದ ಒಟ್ಟು ಆಯ 12 ಲಕ್ಷ ರೂಪಾಯಿಗಳಿಗೂ ಮಿಕ್ಕಿತು ಎಂದು ವರದಿಗಳು ತಿಳಿಸುತ್ತವೆ.




ಅಂದು ಕನ್ನಡಿಗರ ಭವ್ಯ ಜೀವಿಕಿನ ಆಗರವಾಗಿದ್ದ ಶಿವಗಂಗೆ ಇಂದೂ ಅದೇ ಸ್ಫೂರ್ತಿಯ ಚಿಲುಮೆಯ ತಾಣವಾಗಿದೆ. ಬೆಂಗಳೂರಿನಿಂದ 51 ಕಿ.ಮೀ. ದೂರದಲ್ಲಿ ಅಪಾರ ಜನರನ್ನು ತನ್ನೆಡೆಗೆ ಆಕರ್ಷಿಸುತ್ತಿರುವ ಶಿವಗಂಗೆ ಬೆಟ್ಟದ ವಿಹಂಗಮ ನೋಟ ನಮ್ಮ ಮನದಲ್ಲಿ ಅಚ್ಚಳಿಯದೆ ಉಳಿಯುತ್ತದೆ. ಬೆಟ್ಟದ ತಪ್ಪಲಿನಲ್ಲಿ ನಿಂತು ಸುತ್ತಲೂ ಕಣ್ಣು ಹಾಯಿಸಿದಾಗ ಕಾಣುವ ಅದ್ಭುತ ಆಕಾರಗಳು ಸದಾ ಕಲ್ಪನೆಯ ಗುಂಗಿನಲ್ಲಿ ತುಂಬಿರುತ್ತದೆ. ಪೂರ್ವ ದಿಕ್ಕಿನಿಂದ ಬೆಟ್ಟವನ್ನು ನೋಡಿದಾಗ ವೃಷಭಾಕಾರವಾಗಿಯೂ ಮತ್ತು ಉತ್ತರ ದಿಕ್ಕಿನಿಂದ ಲಿಂಗಾಕಾರವಾಗಿಯೂ, ಪಶ್ಚಿಮ ದಿಕ್ಕಿನಿಂದ ಸರ್ಪಾಕಾರವಾಗಿಯೂ ಹಾಗೂ ದಕ್ಷಿಣ ದಿಕ್ಕಿನಿಂದ ವಿಘ್ನೇಶಾಕಾರವಾಗಿಯೂ ಕಂಡು ಬರುತ್ತದೆ. ಬಹುಶಃ ಇದರಿಂದಲೇ ಇದರ ಮಹತ್ವ ಪ್ರಾರಂಭವಾಗಿದ್ದಿರಬೇಕು.

ಬೆಟ್ಟದ ತಪ್ಪಲಿನಲ್ಲಿ ಬೃಹದಾಕಾರವಾದ ಕಲ್ಯಾಣಿ ಇದೆ. ಸುತ್ತಮುತ್ತಲೂ ಕಲ್ಲಿನ ಚಮತ್ಕಾರದ ಕೆಲಸಗಳಿವೆ. ಅರಮನೆ–ಗುರುಮನೆಗಳು ಪಾಳು ಬಿದ್ದಿವೆ. ಕೆಲವಂತೂ ಸಂಪೂರ್ಣವಾಗಿ ನಾಶವಾಗಿವೆ. ಶಿವಗಂಗೆಯ ಮಹಾದ್ವಾರ ಹಿಂದಿನ ಭವ್ಯತೆಯನ್ನು ಸೂಚಿಸುತ್ತದೆ. ಅಲ್ಲಿಂದ ಶಿವಗಂಗೆಯ ಬೆಟ್ಟದ ಬುಡದವರೆವಿಗೂ ಅಂಗಡಿಗಳ ಸಾಲುಗಳು ಕಂಗೊಳಿಸುತ್ತವೆ. ಊರಿಗೆ ಹೆದ್ದಾರಿ ಇದೇ ಇತ್ತೆಂದು ಕಾಣುತ್ತದೆ. ಉಳಿದು ಕೊಂಡಿರುವುದು ಇದೊಂದೆ, ಬಹಳ ಹಿಂದಿನ ಕಾಲದ ಚಾವಡಿಯ ಮನೆಗಳು ಇವೆ. ಇಲ್ಲಿಂದ ಪ್ರಾರಂಭವಾಗುತ್ತದೆ, ಬೆಟ್ಟ ಹತ್ತುವ ಕಾರ್ಯ. ಬೆಟ್ಟದ ಬುಡದಿಂದ ಅಂತಿಮದಲ್ಲಿರುವ ಗಿರಿ ಗಂಗಾಧರೇಶ್ವರನವರೆವಿಗೂ ಇರುವ ಮೆಟ್ಟಿಲುಗಳ ಸಂಖ್ಯೆ 3031, ಆದರ ಮಧ್ಯೆ ಒಂದು ಕವಲು ದಾರಿಯನ್ನು ಯಾತ್ರಿಕ ಪ್ರವೇಶಿಸಬೇಕಾಗುತ್ತದೆ. ಅದೇ ಒಳಕಲ್ಲು ತೀರ್ಥ. ಅಲ್ಲಿಗೆ 415 ಮೆಟ್ಟಿಲುಗಳು, ಮತ್ತೆ ಇನ್ನೊಂದು ಕವಲು ದಾರಿ, ಅದು ಕುಂಭಾವತಿ ತೀರ್ಥ. ಅಲ್ಲಿಗೆ 105 ಮೆಟ್ಟಿಲುಗಳು. ಅಂದರೆ ಒಟ್ಟು 3551 ಕಲ್ಲುಗಳಲ್ಲಿರುವ ಮೆಟ್ಟಿಲುಗಳನ್ನು ದಾಟಬೇಕಾಗುತ್ತದೆ. ಇದು ಬಹು ಶ್ರಮದ ಕೆಲಸವೇ. ಶುಭ ಕಾರ್ಯಗಳಿಗೆ ಮುನ್ನ ವಿಘ್ನೇಶ್ವರನ ದರ್ಶನ ಮಂಗಳಕರ ಎಂಬುದು ಪ್ರತೀತಿ. ಎಂತಲೇ ಬೆಟ್ಟ ಹತ್ತುವ ಪ್ರಥಮದಲ್ಲಿಯೇ ವಿಶಾಲ ಉದರದ ಏಕಕಲ್ಲಿನ ಬೃಹತ್ ಗಣಪತಿಯ ಭವ್ಯ ದರ್ಶನ ಎಲ್ಲರ ಪಾಲಿಗೆ ದೊರೆಯುತ್ತದೆ. ಸಾಮಾನ್ಯವಾಗಿ ಪ್ರತಿಯೊಬ್ಬರೂ ಇಲ್ಲಿ ಪೂಜೆ ಮಾಡಿಸಿ ಕೊಂಡು ಅತ್ಯಂತ ಉತ್ಸುಕತೆಯಿಂದ ಬೆಟ್ಟವನ್ನು ಸುಲಭವಾಗಿ ಹತ್ತುವ ಹಮ್ಮಿನಿಂದ ಮುನ್ನಡೆಯುತ್ತಾರೆ. ಮುಂದೆ ಸಿಗುವುದೇ ವೀರಭದ್ರ ದೇವರು, ಶಿವಗಂಗೆಯ ತುಂಬಾ ವೀರಭದ್ರ ದೇವರುಗಳು, ಶಿವಲಿಂಗಗಳು, ಮತ್ತು ಬಸವಣ್ಣನ ವಿಗ್ರಹಗಳು ತುಂಬಿಕೊಂಡಿವೆ. ಬೃಹದಾಕಾರವಾದ ಕೋಟೆಯ ದೇವಸ್ಥಾನದ ಗರ್ಭಗುಡಿಯಲ್ಲಿ ನೆಲೆಸಿದ್ದಾನೆ ಅತ್ಯಂತ ಪ್ರಸಿದ್ಧ ವೀರಭದ್ರ, ಅತನ ಮುಂದೆ [illegible] ಬಸವನು, ಅಲ್ಲಿಂದ ಮುಂದೆ ದರ್ಶನಕ್ಕಿರುವುದೇ ಹೊನ್ನಾದೇವಿ (ಇಲ್ಲಿನ ಸ್ತ್ರೀ ರೂಪದ ದೇವತೆಗೇ ಇರುವ ವಿಶೇಷ ಸಂಗತಿ ಎಂದರೆ ಅವರ ನಾಲಿಗೆ ಮತ್ತು ತುಟಿಗಳಲ್ಲಿ ಕಾಣುವ ಕೆಂಪು ರಕ್ತ.) ಹೊನ್ನಾದೇವಿಗೆ ನಮಸ್ಕರಿಸಿ ಮುನ್ನಡೆದರೆ ದರ್ಶನಕ್ಕಿರುವುದೇ ಗವಿ ಗಂಗಾಧರೇಶ್ವರ ಸ್ವಾಮಿ ದೇವಸ್ಥಾನ.

ಶಿವಗಂಗೆಯ ದೇವಸ್ಥಾನಗಳಲ್ಲಿ ಅತ್ಯಂತ ಹಿರಿಯ ಮತ್ತು ಪ್ರಖ್ಯಾತಿ ಪಡೆದಿರುವ ದಿವ್ಯ ದೇವಾಲಯವಿದು. ಇದು ದೊಡ್ಡ ಬಂಡೆಯ ಕೆಳಗಡೆ ಆವರಿಸಿದೆ. ಈ ಬಂಡೆಯ ಮಧ್ಯೆ ಅನೇಕ ಸುರಂಗ ಮಾರ್ಗಗಳಿವೆ. ಇಲ್ಲಿನ ಶಿವಲಿಂಗವನ್ನು ಉದ್ಭವ ಮೂರ್ತಿ ಎಂದು ಕರೆಯುತ್ತಾರೆ. ಈ ಶಿವಲಿಂಗವಾದರೂ ವಿಶೇಷವಾದ ಕಲ್ಲಿನಿಂದ ನಿರ್ಮಿತವಾಗಿರುವುದು, ಮತ್ತು ಅಸಕ್ತಿಯನ್ನು ಕೆರಳಿಸುವಂಥದ್ದು. ಗರ್ಭಗುಡಿಯಲ್ಲಿ ಅವರಿಸಿರುವ ಈ ಶಿವಲಿಂಗವು ಸ್ವಲ್ಪ ಓರೆಯಾಗಿರುವುದನ್ನು ಎಲ್ಲರೂ ಗಮನಿಸಬಹುದು. ಈ ಗಂಗಾಧರೇಶ್ವರನಿಗೆ ಪ್ರತಿ ದಿನ ವಿವಿಧ ರೀತಿಯ ನೈವೇದ್ಯಗಳು ನಡೆಯುತ್ತಿರುತ್ತವೆ. ಸದಾ ಜನರಿಂದ ಆಕರ್ಷಿಸಲ್ಪಡುವ, ಜನರಿಂದ ಕೂಡಿರುವ ದೇವಾಲಯ ಈ ಪ್ರದೇಶಕ್ಕೆಲ್ಲಾ ಇದೊಂದೇ. ಈ ಉದ್ಭವ ಮೂರ್ತಿಯ ಮೇಲೆ ತುಪ್ಪ ನೈವೇದ್ಯ ಮಾಡಿದಾಗ ಅರ್ಥಾತ್ ಶಿವಲಿಂಗ ಮೂರ್ತಿಯ ಮೇಲೆ ಇಳಿಯ ಬಿಟ್ಟಾಗ ನಮಗೆ ದೊರೆಯುವುದು ಬೆಣ್ಣೆ. ಆ ಮೂರ್ತಿಯ ಮೇಲೆ ಜಿಡ್ಡು ಲೇಶ ಮಾತ್ರವೂ ಉಳಿಯುವುದಿಲ್ಲ. ಅಂತಹ ವಿಶೇಷ ಶಕ್ತಿ ಈ ಮೂರ್ತಿಗಿದೆ. ತುಪ್ಪ ಹಾಕಿ ಬೆಣ್ಣೆ ಪಡೆಯ ಬಹುದಾದ ಪವಾಡ ನಿಜಕ್ಕೂ ಅದ್ಭುತವೇ ಸರಿ. ನೈವೇದ್ಯ ಮಾಡಿದ ತುಪ್ಪದ ಬೆಣ್ಣೆಯನ್ನು ಕಣ್ಣುಗಳ ಎಸ್ಸೆಗೆ ಹಾಕಿದಾಗ ರೋಮಾಂಚಕಾರಿ ಅನುಭವವಾಗುವುದನ್ನು ಪ್ರತ್ಯಕ್ಷವಾಗಿ ಕಂಡರೆ ತುಂಬಾ ಸೋಜಿಗವೆನಿಸುತ್ತದೆ. ಗಂಗಾಧರೇಶ್ವರನ ಸಮೀಪ್ಯದಲ್ಲಿಯೇ ನೆಲೆಸಿದ್ದಾಳೆ ಪಾರ್ವತೀ ದೇವಿ. ಇವರೀರ್ವರ ಎದುರಿಗೆ ಮುಖಾ ಮುಖಿಯಾಗಿ ನಿಂತಿದ್ದಾನೆ, ಕನ್ನಡ ನಾಡಿನ ಐತಿಹಾಸಿಕ ವೀರ ಪುರುಷ ಮಾಗಡಿ ಕೆಂಪೇಗೌಡ. ಈ ದೇವಾಲಯ ಕೆಂಪೇಗೌಡನ ಕಾಲಕ್ಕಿಂತಲೂ ಸುಮಾರು 600 ವರ್ಷಗಳ ಹಿಂದಿನ ಇತಿಹಾಸವನ್ನು ತಿಳಿಸುತ್ತದೆ. ಇದರ ಜೀರ್ಣೋದ್ಧಾರ ಮಾಡಿದವ ಮಾಗಡಿ ಕೆಂಪೇಗೌಡ. ಈತನೊಂದಿಗೆ ಅಣ್ಣ ಕೆಂಪು ಸೋಮಣ್ಣ, ತಮ್ಮ ಹುರುಳಿ ಚಿಕ್ಕಣ್ಣ ವಿನಮ್ರವಾಗಿ ಈಗಲೂ ಸ್ವಾಮಿಯ ಎದುರಿಗೆ ಕೈಮುಗಿದು ತಮ್ಮ ಪ್ರಣಾಮಗಳನ್ನು ಅರ್ಪಿಸುತ್ತಾ ಕ್ರಿ. ಶ. 1531ರ ಕೀಲಕ ನಾಮ ಸಂವತ್ಸರ ಕಾರ್ತಿಕದಿಂದ ನಿಂತಿದ್ದಾರೆ, ನಿಂತೇ ಇರುತ್ತಾರೆ.

ಗಂಗಾಧರೇಶ್ವರನನ್ನು ನಮಿಸಿ ಮುಂದೆ ಬಂದರೆ ಇರುವುದೇ ಕಲ್ಲಿನ ವೀರಭದ್ರೇಶ್ವರ. ಇಲ್ಲಿನ ಕೆತ್ತನೆ ಚಮತ್ಕಾರದಿಂದ ಕೂಡಿದೆ. ಇಷ್ಟು ದೂರ ಬರುವಷ್ಟರಲ್ಲಿ ಆಯಾಸ ತಲೆದೋರುತ್ತದೆ. ನೀರಿನ ಅವಶ್ಯಕತೆ ಕಂಡು ಬರುತ್ತದೆ. ಪ್ರಕೃತಿ ಮಾತೆಯ ಮಡಿಲಿನಲ್ಲಿ ಅದ್ಭುತ ಪವಾಡಗಳೆಷ್ಟೋ ನಡೆಯುತ್ತದೆ. ಯಾಂತ್ರಿಕ ಮಾನವ ಯಃಕಶ್ಚಿತಕಾರ್ಯ ಮಾಡಬಲ್ಲನೇ ವಿನಃ ಇಂತಹ ಸುಂದರ ಸುದೃಶ್ಯ ತಾಣಗಳನ್ನು ನಿರ್ಮಿಸಲಾರ. ಇದೇ ಪ್ರಕೃತಿ ಮಾತೆಯ ಕೊಡುಗೆ, ಇದೇ ಪಾತಾಳಗಂಗೆ. ಬೃಹದಾಕಾರದ ಬಂಡೆಗಳ ಎತ್ತರದ ಬೆಟ್ಟದ ಮಧ್ಯದಲ್ಲಿ ಪಾತಾಳದಾಳದಲ್ಲಿ ಗಿರಿ ಕಂದರಗಳ ನಡುವೆ ನೆಲೆಸಿದ್ದಾಳೆ. (ಇಲ್ಲಿ ಸಪ್ತ ಋಷಿ ಮುನಿ

**ಶ್ರೀ ಗೋವಿಂದಸ್ವಾಮಿ**

ಗಳು ತಪಸ್ಸು ಮಾಡಿದ್ದರೆಂದು ಪ್ರತೀತಿ. ಈ ಜಲದ ಸವಿಯನ್ನು ಅನುಭವಿಸಿ ಯಾತ್ರಿಕ ನಿಟ್ಟುಸಿರು ಬಿಡುತ್ತಾ ಬರುತ್ತಾನೆ ಕಲ್ಲಿನ ಬಸವಣ್ಣನ ಬಳಿ. ಒಂದೇ ಕಲ್ಲಿನಲ್ಲಿ ಕೆತ್ತಿರುವ ಬಸವಣ್ಣನ ಬಳಿ ಒಂದು ವಿಶಾಲ ಹಜಾರವಿದೆ. ತಂಪಾದ ಪ್ರದೇಶ. ಆಯಾಸ ಪರಿಹರಿಸಿಕೊಳ್ಳಲು ಮಧ್ಯಂತರ ಸ್ಥಳ. ಇಲ್ಲಿಂದ ಮುಂದೆ ಸಿಕ್ಕುವುದೇ ಪ್ರಪಂಚದ ನೃತ್ಯದಲ್ಲಿ ಅಸದೃಶ್ಯವಾದ, ಅನುಪಮವಾದ, ಹೆಸರುಗಳಿಸಿರುವ ನಾಟ್ಯರಾಣಿ ಶಾಂತಲೆಯ ನೃತ್ಯ ಮಂಟಪ. ಅತ್ಯಂತ ಅಚ್ಚುಕಟ್ಟಾದ ಪ್ರದೇಶ. ಹಳೇಬೀಡು–ಬೇಲೂರುಗಳಲ್ಲಿರುವಂತಹ ಶೃಂಗಾರ ರಸ ಲೀಲೆಗಳ ಭವ್ಯ ತಾಣಗಳ ನೆಲೆ ಇಲ್ಲಿ ಇಲ್ಲದಿದ್ದರೂ ಪ್ರಕೃತಿಯ ನೈಸರ್ಗಿಕ ಸೌಂದರ್ಯವು ಬೆಳಗಿದೆ. ಶಿವಗಂಗೆಯ ರಮಣೀಯ ದೃಶಗಳು ಇಲ್ಲಿಂದ ಚೇತೋಹಾರಿಯಾಗಿ ಕಾಣುತ್ತವೆ. ಇದಕ್ಕಾಗಿಯೇ ಏನೋ ಶಾಂತಲೆ ಈ ಜಾಗವನ್ನು ಮೆಚ್ಚಿದ್ದು, ನೃತ್ಯ ಮಾಡಿದ್ದು. ಕೆಳಗೆ ಕಲ್ಯಾಣಿ ಚೌಕಾಕೃತಿಯಲ್ಲಿ ಕಾಣುತ್ತ ಸದಾ ನೀರಿನಿಂದ ತುಂಬಿರುತ್ತದೆ. ಸುತ್ತಲೂ ಗುಡಿ–ಗೋಪುರಗಳು ಕಂಗೊಳಿಸುತ್ತವೆ. ನೃತ್ಯ ಮಂಟಪದ ಮುಂದುಗಡೆ ಅತಿಜಾರಿಕೆಯ ಬಂಡೆಗಳಿವೆ. ಈ ಬಂಡೆಗಳ ಗಾತ್ರ ಶಿವಗಂಗೆಯ ತಳಹದಿಯವರೆವಿಗೂ ವ್ಯಾಪಿಸಿದೆ. ನುಣುಪಾದ ಕಲ್ಲಿನ ಬಂಡೆಗಳು ಆಕರ್ಷಣೀಯವಾಗಿ ಕಂಗೊಳಿಸುತ್ತವೆ. ಇದರೊಂದಿಗೆ ಊರಿನ ಸಮಸ್ತ ವ್ಯವಹಾರಗಳನ್ನು ನೋಡ ಬಹುದು. ಊರಿಗೆ ಹೊಸಬರು ಬರುವ, ಹೋಗುವ ಮತ್ತು ಶತ್ರುಗಳ ಆಗಮನ ನಿರ್ಗಮನ ಇವೆಲ್ಲವನ್ನೂ ಬಹು ಸೂಕ್ಷ್ಮವಾಗಿ ಗಮನಿಸಬಹುದು.? ಇಲ್ಲಿ ಪ್ರಾಕ್ತನ ಇಲಾಖೆಯವರು ಪರಿಶೋಧನೆ ನಡೆಸಿದರೆ ಇನ್ನೂ ಮಹತ್ತರವಾದ ವಿಷಯಗಳು ಹೊರಬೀಳ ಬಹುದು.

ನೃತ್ಯಗಾತಿಯೊಬ್ಬಳಿಗೆ ಇತಿಹಾಸ ಪರಂಪರೆಯಲ್ಲಿಯೇ ದೊರೆಯದಿದ್ದ ಪಟ್ಟವನ್ನು ಶಾಂತಲೆಗೆ ಅರ್ಪಿಸಿದ ಹೊಯ್ಸಳ ಭೂಪಾಲ ವಿಷ್ಣುವರ್ಧನ. ಇತಿಹಾಸ ಪರಂಪರೆಯಲ್ಲಿಯೇ ಶಾಶ್ವತವಾಗಿ ಬೇರೂರಿ ನಿಲ್ಲ ಬಹುದಾದಂಥ ಶಿಲ್ಪ ಸೊಗಸನ್ನು ಕನ್ನಡ ನಾಡಿಗೆ ಕಾಣಿಕೆಯಾಗಿ ಇತ್ತಳು ಶಾಂತಲೆ. ಚೆಲುವ ನಾರಾಯಣ, ವಿಜಯ ನಾರಾಯಣ, ಲಕ್ಷ್ಮೀನಾರಾಯಣ, ಕೀರ್ತಿ ನಾರಾಯಣ, ವೀರ ನಾರಾಯಣ, ಈ ಐವರು ಕನ್ನಡ ನಾಡಿನಾದ್ಯಂತ ಮೂರ್ತಿವೆತ್ತು ಚಿರಸ್ಥಾಯಿಯಾಗಿ ನೆಲೆಸಿದ್ದಾರೆ. ನಿರಂತರವೂ ಹೊಚ್ಚ ಹೊಸದಾಗಿ, ಅಚ್ಚ ಹಸುರಾಗಿ, ಸವಿದಷ್ಟೂ, ಸವಿಯಾಗಿ ನೂರಾರು ರೂಪಗಳಲ್ಲಿ ರಾಗ ಭಾವಗಳಲ್ಲಿ ಮನಸಳೆಯುವ ಮಹೋನ್ನತ ನೋಟವಾಗಿ, ಆತ್ಮ ಸೌಂದರ್ಯದ ಅರಿವಿದ್ದವರಿಗೆ ಪ್ರೇರಣೆಯ ಸಾಧನವಾಗಿ ನಿಲ್ಲುವಂಥದ್ದು ಗೆಲ್ಲುವಂಥದ್ದು, ಮೆಚ್ಚುವಂಥದ್ದು ಈ ಹೃದಯಂಗಮ ನೋಟ.

'ಯಾವ ಕಾಲ ತಪ್ಪಿದರೂ ಸಾವ ಕಾಲ ತಪ್ಪದು' ಒಬ್ಬೊಬ್ಬರಿಗೆ ಒಂದೊಂದು ಬಗೆಯ ಬೇಗುದಿಯನ್ನು ಇಟ್ಟು ಅಂತಿಮ ಗೊಳಿಸುವುದೇ ವಿಧಿಯ ಆಟ. ಯಾರೆಷ್ಟೇ ದೊಡ್ಡವರಾಗಿರಲಿ–ದಡ್ಡನಾಗಿರಲಿ, ಬಡವನಾಗಿರಲಿ–ಬಲ್ಲಿದನಾಗಿರಲಿ, ಈ ನಾಟಕದ ಅಂತಿಮ ತೆರೆಗೆ ಒಳಗಾಗಲೇ ಬೇಕು ಶಾಂತಲೆ – ವಿಷ್ಣುವರ್ಧನರ ನಡುವೆ ಕಂದಕವಾಗಿ ನಿಂತ ಕಿರಿಯರಾಣಿ ತಮಿಳುನಾಡಿನ ಬಮ್ಮಲೆಯಿಂದ ಬೇಸತ್ತು ಬಿರುಸುನಿಂದ ನುಗ್ಗಿ ಬಂದಳು ಶಾಂತಲೆ ಶಿವಗಂಗೆಗೆ. ಕೊನೆ ಮೊದಲಿಲ್ಲದೆ–ಗೊತ್ತು ಗುರಿಯಿಲ್ಲದೆ ಏರಿ ನಿಂತಳು ಕೊಡುಗಲ್ಲು ಬಸವನಲ್ಲಿಗೆ. ಹಿರಿಯರಸಿ ಪಟ್ಟದ ರಾಣಿಯ ಕರ್ತವ್ಯವನ್ನು ಯೋಚಿಸಿದಳು. ಕಿರಿಯ ರಾಣಿ ಸೋದರಿ ಲಕ್ಷ್ಮಿಯನ್ನು ನೆನೆಸಿಕೊಂಡಳು. ಆಕೆಯ ಚಿತ್ತ ವಿಭ್ರಮ ಭಾವೋದ್ರೇಕಕ್ಕೆ ದಾರಿ ಮಾಡಿಕೊಟ್ಟಿತು. ಭಾವಾತಿರೇಕದಿಂದ ನ್ಯಾಯ ಸಮ್ಮತವಾದ ಸಂಗತಿಗಳೂ ವಿರೂಪ ಗೊಳ್ಳುತ್ತದೆ ಎಂಬುದಕ್ಕೆ ಈ ದೃಶ್ಯವೇ ಸಾಕ್ಷಿ. ಅವಳ ಮನವೆಲ್ಲಾ ಭಣಭಣವಾಗಿತ್ತು, ಎದೆಯಲ್ಲಾ ರಣ ರಣವಾಗಿತ್ತು. ಓ! ಆ ಸೂತ್ರಧಾರಿ – ಪಾತ್ರಧಾರಿಯನ್ನು ಸ್ಮರಿಸಿದಳು, ಶಪಿಸಿದಳು, ಜಪಿಸಿದಳು ಕೋಡುಗಲ್ಲು ಬಸವನ ಸುತ್ತಿದಳು ಒಮ್ಮೆ, ಏನೋ ಯೋಚಿಸಿದಳು, 'ಹೆಂಗಸಿನ ಬಾಳು ಬಾಳೆಲೆಯಂಥದ್ದು, ಬಾಳೆಲೆ ಮುಳ್ಳಿನ ಮೇಲೆ ಬಿದ್ದರೂ ಬಾಳೆಲೆಗೇ ಮುಪ್ಪು, ಮುಳ್ಳು ಬಂದು ಬಾಳೆಲೆ ಮೇಲೆ ಬಿದ್ದರೂ ಬಾಳೆಲೆಗೆ ಮುಪ್ಪು' ಎಂಬಂತಾಯಿತು, ಅವಳ ಬಾಳಿಗೆ. ಕೆಳಗೆ ದಿಟ್ಟಿಸಿ ನೋಡಿದಳು ಇನ್ನೊಮ್ಮೆ, ಆ ದೃಶ್ಯ–ಅಸದೃಶ, ಆ ರೂಪ–ಅಪರೂಪವಾಗಿತ್ತಿದ್ದಂತೆಯೇ ಬಸವನ ಮೇಲಿಂದ ಮಣ್ಣಿಗಾಗಿ ಹಾತೊರೆಯುತ್ತಾ ಕೆಳಕ್ಕೆ ಧುಮುಕಿದಳು ಶಾಂತಲೆ. ಆ ಮಣ್ಣಾದರೋ ಅವಳ ಆಗಮನವನ್ನೇ ಅತ್ಯಂತ ಆದರದಿಂದ ಸ್ವಾಗತಿಸಿ ಮೇಲಕ್ಕೇಳದಂತೆ ಅಪ್ಪಿ ಹಿಡಿಯಿತು. ಬೆಟ್ಟ ಗುಡ್ಡಗಳು, ದೇವಸ್ಥಾನಗಳು, ಗಿರಿ–ಪೊದರುಗಳು ಶಾಂತಲೆಯ ನೃತ್ಯವನ್ನು ಕಂಡವು. ಚಿತ್ತಾಕರ್ಷಕವಾದ ಗಾನ–ನೃತ್ಯ ರೂಪಕವನ್ನು ಪಡೆದವು. ಪ್ರಾಜ್ವಲ್ಯಮಾನವಾದ ಆ ದೀಪ ನಂದಿತು. ನಿಂತಿತ್ತು ಉಸಿರು, ಮುಚ್ಚಿತ್ತು

ಕಣ್ಣು, ತೆರೆದಿತ್ತು ಬಾಯಿ, ಹಾರಿತ್ತು ಹಕ್ಕಿ. ನಗುವ ನಂದನವನವಾಗಿದ್ದ ಶಿವಗಂಗೆ ಬಣ ಬಣ ಗುಡುವ ಶವಬಂಡೆಯಾಯಿತು. ಕ್ರಿ. ಶ. 1131ರ ಸೋಮವಾರ ಪೂರ್ವಾಹ್ನ.

ಇಂದು ಆ ನೃತ್ಯ ಮಂಟಪ ಶಾಂತಲೆಯ ಬರುವಿಕೆಯನ್ನೇ ಕಾದು ನಿಂತಿದೆ. ಆದರೆ ತಳಕಾಣದ ಅಂತರಾಳದಲ್ಲಿ ಹುದುಗಿ ಹೋಗಿದೆ ಸಂಗೀತದ ಮಾಧುರ್ಯ. ಜನತೆಯ ವಿಶ್ವಾಸ, ರಾಜನ ಹೊಗಳಿಕೆ, ಪ್ರಕೃತಿ ದೇವಿಯ ಸಿಂಗಾರ ಎಲ್ಲವೂ ನಶಿಸಿವೆ. ಬಂಡೆಗಳು ತೆರೆ ಕೆರೆಯಲ್ಲಿ ತೂಗಾಡಿ ಒಂದಕ್ಕೊಂದು ಅಪ್ಪಳಿಸಿ ಸಿಡಿ ಸಿಡಿದು, ಕಣವಾಗಿ ಒಡೆದು ಕರಗಿ ಕೂಗುತ್ತಿವೆ; ಶಾಂತಲೆಯ ಮರು ಜನ್ಮಕ್ಕಾಗಿ, ಶಾಂತಲೆಯ ಬರುವಿಕೆಗಾಗಿ, ಶಾಂತಲೆಯ ನೃತ್ಯಕ್ಕಾಗಿ, ಆ ಶಾಂತಲೆಯ ಆತ್ಮಕ್ಕಾಗಿ.

ನಾಟ್ಯರಾಣಿ ಶಾಂತಲಳ ನೃತ್ಯ ಮಂಟಪದ ನಂತರ ಮತ್ತೆ ಬಸವಣ್ಣನ ದರ್ಶನ. ಯಾವುದೇ ದೇಸ್ಥಾನಗಳಲ್ಲಿಯೂ ಇಷ್ಟೊಂದು ಭಾರೀ ಪ್ರಮಾಣದ ಬಸವಣ್ಣ ವಿಗ್ರಹಗಳನ್ನು ಕಾಣಲಾರೆವು. ಇಲ್ಲಿಂದ ಕವಲು ದಾರಿಯಲ್ಲಿ ನಡೆಯ ಬೇಕಾಗುತ್ತದೆ. ಆ ಕವಲು ದಾರಿಯಲ್ಲಿ ಇರುವುದೇ ಒಳಕಲ್ಲು ತೀರ್ಥ. ಇಲ್ಲಿ ದೇಹವನ್ನು ದಂಡಿಸ ಬೇಕು. ದೊಡ್ಡ ಬಂಡೆಯ ಮಧ್ಯೆ ಆವೃತ್ತವಾಗಿದೆ. ಇಲ್ಲಿಯೂ ಒಂದು ದೇವಸ್ಥಾನ. ಅದರ ಹಿಂದೆಯೇ ಒಳಕಲ್ಲು ತೀರ್ಥ. ಸುಮಾರು 3 ಅಡಿಗಳ ಕೆಳಗೆ, ನೀರು ಹರಿಯುತ್ತಿರುತ್ತದೆ. ಒಂದೇ ಕೈಯಿಟ್ಟು ನೀರನ್ನು ತೆಗೆದುಕೊಳ್ಳಬೇಕಾಗುತ್ತದೆ. ಇಲ್ಲಿ ಪವಾಡ ಸದೃಶ ಕಲ್ಪನೆಯನ್ನು ಇಟ್ಟಿದ್ದಾರೆ ಹಿರಿಯರು.

1. ಕೈಯನ್ನು ಬಾಗಿಸಿ ಆಳದಲ್ಲಿ ಇಟ್ಟರೆ ಮಾತ್ರ ನೀರು ದೊರೆಯುವುದು (ಕೆಲವರಿಗೆ ಬೇಗನೆ ಹತ್ತಿರದಲ್ಲಿಯೇ ಸಿಗುವುದು ಕಂಡು ಬಂದಿತು)

2. ನೀರು ಹರಿಯುತ್ತಿರಬಹುದೆಂದು ಕಲ್ಪಿಸೋಣ. ಒಮ್ಮೊಮ್ಮೆ ಹರಿಯುವುದು ನಿಂತಾಗ ನೀರು ಸಿಗದಿರಬಹುದೆಂದು ಕೊಳ್ಳೋಣ.

(ಆದರೆ ಎಷ್ಟೋ ಸಾರಿ ಕೈಯಿಟ್ಟಾಗಲೂ ಕೆಲವರಿಗೆ ನೀರು ಸಿಗದೆ ಇದ್ದುದು, ಆ ತಕ್ಷಣವೇ ಇನ್ನೊಬ್ಬರು ಇಟ್ಟಾಗ ಸಿಗುವುದು ಆಶ್ಚರ್ಯವುಂಟು ಮಾಡುತ್ತದೆ.)

ಈ ಒಳಕಲ್ಲು ತೀರ್ಥದ ಬಂಡೆಯ ಒಳಗಡೆ 115ಕ್ಕೂ ಮಿಕ್ಕ ಮೆಟ್ಟಿಲುಗಳಿವೆ ಎಂದರೆ ಇದರ ವಿಸ್ತಾರ ಅರಿವಾಗುವುದು. ಅಲ್ಲಿಂದ ಮತ್ತೊಂದು ಕವಲು ದಾರಿಯನ್ನು ನಾವು ಪ್ರವೇಶ ಮಾಡಬೇಕಾಗುತ್ತದೆ. ಅದೇ ಕುಂಭಾವತಿ ತೀರ್ಥ. ಕುಂಭಾವತಿ ತೀರ್ಥ – ಪಾತಾಳಗಂಗೆಯ ಪ್ರತಿರೂಪವಾಗಿದೆ. ಇಲ್ಲಿನ ವೈಶಿಷ್ಟ್ಯ ಮತ್ತು ಜಾಗರೂಕತೆಯ ಅಂಶವೆಂದರೆ ಇನ್ನು ಬೆಟ್ಟದ ಮೇಲೆ ನೀವು ಹೋಗಬೇಕಾಗಿದ್ದರೆ ನಿಮಗೆ ನೀರು ದೊರೆಯುವ ಅಂತಿಮ ಪ್ರದೇಶ ಇದೊಂದೇ, ಇಷ್ಟು ಹೊತ್ತಿಗೆ ಯಾತ್ರಿಕ ಸಾಕಷ್ಟು ಆಯಾಸ ಪಟ್ಟಿರಬೇಕಾಗುತ್ತದೆ. ಪರಿಹರಿಸಿಕೊಳ್ಳಲು ಇದು ಅಂತಿಮ ಘಟ್ಟ. ಸುತ್ತ ಮುತ್ತಲಿನ ಪ್ರದೇಶವೇನೂ ಇಲ್ಲಿಂದ ಗೋಚರವಾಗುವುದಿಲ್ಲ. ಇಲ್ಲೊಂದು ಪುಟ್ಟ ಕಲ್ಯಾಣಿ ಇದ್ದಂತೆ ಕಾಣುತ್ತದೆ. ಕಾಲ ಕ್ರಮೇಣ ಇದು ಮುಚ್ಚಿ ಹೋಗಿದೆ. ಇಲ್ಲವೇ ಮುಚ್ಚಿದ್ದಾರೆ. ಒಂಬತ್ತು ಶತಮಾನಗಳ ಇತಿಹಾಸವನ್ನು ಹೇಳುವ ಈ ಪ್ರದೇಶದಲ್ಲಿ ಇದೇನೂ ಹೊಸತಲ್ಲ. ಇಲ್ಲಿಗೆ ಕವಲು ದಾರಿಗಳಲ್ಲಿ ನಡೆಯುವುದನ್ನು ಕೊನೆಗೊಳಿಸಬೇಕಾಗುತ್ತದೆ. ಇಷ್ಟು ಹೊತ್ತಿಗೆ 3100 ಮೆಟ್ಟಿಲುಗಳನ್ನು ಏರಿದ್ದಾಗಿರುತ್ತದೆ. ಒಂದೆರಡು ಕವಲು ದಾರಿಗಳನ್ನು ಬಳಸಿದ್ದು ಆಗಿ



ರುತ್ತದೆ. ಇನ್ನು ಉಳಿದಿದ್ದು ಅತ್ಯಂತ ಭೀಕರವಾದ ಗಡುಸಾದ ಅಷ್ಟೇ ಮನಮೋಹಕವಾದ ಪ್ರದೇಶದತ್ತ ಕಲ್ಲು ಬಂಡೆಗಳ ನಡುವೆ ಪಾದಯಾತ್ರೆ. ಇಲ್ಲಿಯವರೆವಿಗೂ ಒಂದು ವಿಧವಾದ ಹುಮ್ಮಸ್ಸಿನಿಂದಲೇ ಯಾತ್ರೆ ಆಗಿದ್ದರೆ ಇನ್ನು ಮುಂದಿನದು ವರ್ಣಿಸಲು ಅಸಾಧ್ಯವಾದದ್ದು. ಅಗಾಧವಾದದ್ದು, ಇಲ್ಲಿಂದ ಬೆಟ್ಟದೊಂದಿಗೆ ಹೋರಾಟ ಮಾಡಬೇಕಾಗುತ್ತದೆ. 80° ಕೋನದಲ್ಲಿರುವ ಈ ಪ್ರದೇಶದ ಮೇಲೆ ಹಾದು ಹೋಗಲು ಸಾಧ್ಯವೇ? ಎಂಬ ಪರಿಭ್ರಮಣೆ ಪಡಬೇಕಾಗುತ್ತದೆ. ಕೆಳಗಿನಿಂದ ಅಥವಾ ಮೇಲಿಂದ ನೋಡಿದರೆ ನಿಜಕ್ಕೂ ನಾವು ಬೆಟ್ಟವನ್ನು ಹತ್ತಿದೆವೇ ಅಥವಾ ಇಳಿದೆವೇ ಎನ್ನಿಸುತ್ತದೆ. ಇಂತಹ ಮಹಾನ್ ದಿಬ್ಬದಿಂದ ಕೂಡಿದೆ ಈ ಪ್ರದೇಶ. ಮೂರು ಸಾವಿರ ಮೆಟ್ಟಿಲುಗಳನ್ನು ಹತ್ತಿರದವರಿಗೆ ಇನ್ನು ಉಳಿದಿರುವುದು ಕೇವಲ 600 ಮೆಟ್ಟಿಲುಗಳೇ ಆದರೂ ಅದರ ಎರಡರಷ್ಟು ಆಯಾಸ, ಶಕ್ತಿಪಾತವಾಗುತ್ತದೆ. ಬೆಟ್ಟ ಅತ್ಯಂತ ಕ್ಲಿಷ್ಟವಾಗಿ ಕಡಿದಾಗಿರುತ್ತದೆ. ಕೆಲವು ಕಡೆ ಮೆಟ್ಟಿಲುಗಳೇ ಇರುವುದಿಲ್ಲ. ಅಲ್ಲೆಲ್ಲಾ ಬಂಡೆಗಳೇ ಆಶ್ರಯದಾತ. ಈಗೇನೋ ಕಂಬಿಗಳನ್ನು ಹಾಕಿದ್ದಾರೆ. ಹಿಂದೆ ಯಾವ ರೀತಿ ಬೆಟ್ಟವನ್ನು ಹತ್ತಿ ಇಳಿಯುತ್ತಿದ್ದರು ಎಂಬುದು ದಿಗ್ಭ್ರಮೆಯಾಗುತ್ತದೆ. ಸ್ವಲ್ಪ ಎಚ್ಚರ ತಪ್ಪಿದರೆ ಪ್ರಪಾತದಂತಿರುವ ಬಂಡೆಯೊಂದಿಗೆ ಭೂಮಿಗೆ ಮರಳಬೇಕಾಗುತ್ತದೆ. ಈ 600 ಮೆಟ್ಟಿಲುಗಳನ್ನು ಮೆಟ್ಟಿ ಮೇಲಕ್ಕೆ ಬರುವಷ್ಟರಲ್ಲಿ ಶಿವಗಂಗೆ ಬೆಟ್ಟದ ಅತ್ಯಂತ ಎತ್ತರದಲ್ಲಿರುವ ಸುಂದರ ಕೋಡುಗಲ್ಲಿನ ಬಸವಣ್ಣ ನಿಮ್ಮನ್ನು ಸ್ವಾಗತಿಸುತ್ತಾನೆ. ಅಲ್ಲೂ 30 ಮೆಟ್ಟಿಲುಗಳನ್ನು ಮತ್ತೆ ಏರಬೇಕು. ಇಲ್ಲಿಗೆ ಬೆಟ್ಟ ಏರುವ ಕಾರ್ಯ ಪರಿಸಮಾಪ್ತಿಯಾಗುತ್ತದೆ. ಗಿರಿಗಂಗಾಧರೇಶ್ವರ ಮತ್ತು ಎರಡು ಕಂಬಗಳನ್ನು ನೋಡಬಹುದು. ಬಸವಣ್ಣನನ್ನು ಕಷ್ಟಪಟ್ಟು ಪ್ರದಕ್ಷಿಣೆ ಹಾಕಬಹುದು. ನಂತರ ಕಾಣುವುದು ಸುತ್ತುವ ಬಸವಣ್ಣ. ಯಾರು ಬೇಕಾದರೂ ಇದನ್ನು ಸುತ್ತಿಸಬಹುದು. ಈಗಾಗಲೇ ಸಾಕಷ್ಟು ಸವೆದು ಹೋಗಿದೆ. ಎರಡು ಕಂಬಿಗಳ ನಡುವೆ ಬಂದಾಗ ತಂಗಾಳಿ ತಂಪನ್ನು ಕಂಪನ್ನು ತಂದೊಡ್ಡುತ್ತದೆ. ಈ ಎರಡು ಕಂಬಗಳ ಮೇಲೆ ಹಿಂದೆ ಜ್ಯೋತಿಯನ್ನು ಹಚ್ಚುತ್ತಿದ್ದರೆಂದು ಕಾಣುತ್ತದೆ. ಇಲ್ಲಿ ಜ್ಯೋತಿ ಹಚ್ಚಿದರೆ ಶಿವಗಂಗೆಯ ಬೆಟ್ಟದ ತಳದಿಂದ ಚೆನ್ನಾಗಿ ನೋಡಬಹುದು. ಮಕರ ಸಂಕ್ರಾಂತಿಯ ಶುಭದಿನದಂದು ಇಲ್ಲಿಂದ ಒಳಕಲ್ಲಿನಲ್ಲಿ ನೀರು ಬರುವುದೆಂದೂ ಅದನ್ನು ಗಂಗಾಧರೇಶ್ವನಿಗೆ ಅಭಿಷೇಕ ಮಾಡಲಾಗುವುದೆಂದು ತಿಳಿದು ಬಂದಿತು. ಕೇರಳದಲ್ಲಿರುವ ಅಯ್ಯಪ್ಪನ್ ಬೆಟ್ಟದ ತುದಿಯಲ್ಲಿ ಯಾವ ಸಮಯದಲ್ಲಿ ಬೆಳಕು ಮಿಂಚಿನಂತೆ ಬಂದು ದರ್ಶನ ಕೊಡುವುದೋ ಅದೇ ಸಂದರ್ಭದಲ್ಲಿ ಶಿವಗಂಗೆಯ ಬೆಟ್ಟದ ಮೇಲೆ ಎರಡು ಕಂಬಗಳ ಹತ್ತಿರವಿರುವ ಒಳಕಲ್ಲಿನಲ್ಲಿ ನೀರು ಬರುವುದೆಂದು ತಿಳಿಸುತ್ತಾರೆ. ಗಿರಿ ಗಂಗಾಧರೇಶ್ವರ ದೇವಸ್ಥಾನವೇ ಅಂತಿಮವಾದುದು. ಹತ್ತಿರದಲ್ಲಿಯೇ ಎರಡು ಗಂಟೆಗಳು ಕಾಣುತ್ತವೆ. ಇವಿಷ್ಟು ನೋಡಬೇಕಾದ ಪ್ರದೇಶವಾದನಂತರ ಮನಸ್ಸಿಲ್ಲದೆ ಕೆಳಗೆ ಇಳಿದು ಬರಬೇಕಾಗುತ್ತದೆ. ಬೆಟ್ಟ ಇಳಿಯುವಾಗ ಹತ್ತಿದ್ದಕ್ಕಿಂತ ಇಮ್ಮಡಿ ನೋವಾಗುತ್ತದೆ. ಆಯಾಸವೂ ಆಗುತ್ತದೆ. ಕೆಳಗಿಳಿದು ಬಂದರೆ ಚೌಕಾಕೃತಿಯಲ್ಲಿ ವಿಶಾಲವಾಗಿರುವ ಕಲ್ಯಾಣಿಯಲ್ಲಿ ಈಜಾಡಿದರೆ ದೇಹ ಹಗುರವಾಗುತ್ತದೆ. ಎದುರಿಗೆ ಅಳಿದುಳಿದಿರುವ ಅರಮನೆ–ಗುರುಮನೆ, ದೇವಸ್ಥಾನಗಳತ್ತ ಗಮನ ಹರಿಸಿದರೆ ಅಂದಿನ ಭವ್ಯತೆಯ ಮೆರುಗು ಕಾಣುತ್ತದೆ. ನಾಟ್ಯರಾಣಿ ಶಾಂತಲಾ, ವಿಷ್ಣುವರ್ಧನ, ಮತ್ತು ಬೆಂಗಳೂರಿನ ಕೆಂಪೇಗೌಡನ ಹೆಸರುಗಳು ಈ ಪರ್ವತ ಇರುವವರೆವಿಗೂ ಚಿರಸ್ಥಾಯಿಯಾಗಿ ಉಳಿಯುತ್ತದೆ. ★

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರ್ಯಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಸ್ನೇಹಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಸಂಪರ್ಕಿಸಿ

**ಆಡಳಿತ ನಿರ್ವಹಣಾಧಿಕಾರಿ**

**ತಿ. ತಿ. ದೇ. ತಿರುಪತಿ.**

# ಶಿವರಾತ್ರಿಯ ಮಹಿಮೆ

ಹಿರಿಯರು ಜೀವನವನ್ನು ಶಿವರಾತ್ರಿ ಎನ್ನು ತ್ತಾರೆ. ಇದರ ತಾತ್ಪರ್ಯವನ್ನು ಭಾರತೀಯರು ಪೂರ್ಣ ತಿಳಿಯಬೇಕು. ಶಿವರಾತ್ರಿ ಪ್ರತಿವರ್ಷ ಮಾಘ ಬಹುಳ ಚತುರ್ದಶಿಯ ರಾತ್ರಿ. ಆ ರಾತ್ರಿ 12 ಗಂಟೆಗೆ ಲಿಂಗೋದ್ಭವ ಕಾಲವೆನ್ನುತ್ತಾರೆ. ರಾತ್ರಿ ಜಾಗರಣೆ ಮಾಡುತ್ತ ಶಿವಸ್ಮರಣೆ ಮಾಡ ಬೇಕು. ಉಷಃ ಕಾಲದಲ್ಲಿ ಪುನಃ ಸ್ನಾನ ಮಾಡಿ ಶಿವಾರಾಧನೆ ಮಾಡಬೇಕು. ಯಾವ ದಿನ ಶಿವರಾತ್ರಿಯೋ ಅಂದು ಹಗಲು ಮಹಾನ್ಯಾಸ ಪೂರ್ವ ಕವಾಗಿ ರುದ್ರಾಭಿಷೇಕ ಮಾಡಿದರೆ ಆಯುರ್ವೃದ್ಧಿ ಎನ್ನುತ್ತಾರೆ ಹಿರಿಯರು.

ಪರಮೇಶ್ವರನು ಏಕನೇ ಆದರೂ ಸೃಷ್ಟಿಸುವ ಸಮಯದಲ್ಲಿ ಬ್ರಹ್ಮನೆಂದೂ, ಪೋಷಣಕಾಲದಲ್ಲಿ ವಿಷ್ಣುವೆಂದೂ, ಸಂಹಾರ ಕಾಲದಲ್ಲಿ ರುದ್ರ ಅಥವಾ ಶಿವನೆಂದೂ ಕರೆಯಲ್ಪಡುತ್ತಾನೆ. ಎಂದರೆ ಶಿವನು ಮರಣದ ಅಧಿದೇವತೆ. ಮರ್ತ್ಯರೆಲ್ಲರೂ ಮರಣ ಶೀಲರಾದ್ದರಿಂದಾಗಿ ಅಪಮೃತ್ಯು ಬಾರದಿರಲು ಶಿವನನ್ನು ಪ್ರಾರ್ಥಿಸಬೇಕು. ಅಪಮೃತ್ಯುವೆಂದರೆ ಕಿರಿಯ ವಯಸ್ಸಿನಲ್ಲಿ ಯಾವ ರೈಲು, ಕಾರು, ವಿಮಾನ ಪ್ರಮಾದಗಳಲ್ಲಿಯೋ ಮೃತಿಹೊಂದುವಿಕೆ. ಹುಟ್ಟಿದವನಿಗೆ ಸಾವು ತಪ್ಪದಿದ್ದರೂ, ಅಪ ಮೃತ್ಯು, ದುರ್ಮರಣ ಬಾರದಿರಲು ಶಿವಾರಾಧನೆ ಬಹುಮುಖ್ಯ. ಹುಟ್ಟು ಸಾವುಗಳು ನಮ್ಮ ಕೈಯ್ಯೊಳಗಿಲ್ಲ. ಯಾವ ವ್ಯಕ್ತಿ ಹೇಗೆ, ಎಲ್ಲಿ ಮರಣಿಸುವುದೆಂಬುದು ಹಣೆಯಲ್ಲಿ ಬರದಂತೆ ಎಂದೂ, ಅದು ನಮ್ಮ ಜನ್ಮಾಂತರ ಸುಕೃತಿ ದುಷ್ಕೃತಿಗಳಂತೆ ಇರುವುದೆಂದೂ ಹಿಂದೂ ಧರ್ಮವು ಹೇಳುತ್ತಿದೆ. ಒಬ್ಬವ್ಯಕ್ತಿ ನೂರುವರ್ಷ ಜೀವಿಸಿ, ಪತ್ನೀ ಪುತ್ರ ಪೌತ್ರರ ಸನ್ನಿಧಿಯಲ್ಲಿ ತನ್ನ ಮನೆಯಲ್ಲಿ ಸಾವನ್ನಪ್ಪಿದರೆ ಅಂತಹ ಸಾವು ಜನ್ಮಾಂತರ ಪುಣ್ಯ ವಿದ್ದವರಿಗೆ ಮಾತ್ರ ಸಾಧ್ಯ. ಮಹಾಪಾಪಾತ್ಮರಿಗೆ ದುರ್ಮರಣ ಅನಿವಾರ್ಯ ಎಂದು ಹಿರಿಯರು ಹೇಳುವರು. ಜ್ಯೋತಿಶ್ಶಾಸ್ತ್ರದಲ್ಲಿ ಯಾವ ವ್ಯಕ್ತಿ ಹೇಗೆ ಎಲ್ಲ ಸಾವನ್ನಪ್ಪುವನೆಂದು ಹೇಳಲಾಗಿದೆ. "ಶುಭೈ ಶುಭೇದೇಶೇ ಪಾಪೈ ಕೀಕಟೇ"—ಎಂದರೆ ಕಾರಕಾಂಶ ಲಗ್ನದ ಮೂರನೇ ಮನೆಯಲ್ಲಿ ಶುಭಗ್ರಹಗಳಿದ್ದಲ್ಲಿ ನೂರುವರ್ಷ ಜೀವಿಸಿ, ತನ್ನ ಮನೆಯಲ್ಲಿ ಪುತ್ರಪೌತ್ರಾದಿಗಳ ಸಮೀಪದಲ್ಲಿ ಮರಣ. ಪಾಪ ಗ್ರಹಗಳು ಇದ್ದಲ್ಲಿ ಎಲ್ಲಿಯೋ ಹೆಂಡತಿ ಮಕ್ಕಳಿಂದ ದೂರವಾಗಿ ದಿಕ್ಕಿಲ್ಲದ ಸಾವು. ಜೊತೆಗೇ ಯಾವ ವ್ಯಕ್ತಿ ಯಾವ ವ್ಯಾಧಿಯಿಂದ ಸಾಯುವನೆಂದು ಜ್ಯೋತಿಶ್ಶಾಸ್ತ್ರ ಹೇಳಿದೆ. ಆದರೆ ಈ ಮರಣವು ಹೀಗೆ ಬರಬೇಕಾಗಿದ್ದಲ್ಲಿ ಅಂತಹ ಅಪಮೃತ್ಯುವನ್ನು ತಪ್ಪಿಸಿಕೊಳ್ಳುವ ಶಕ್ತಿ ಮಾನವರಿಗೆ ಇದೆಯೇ ಎಂಬ ಸಂದೇಹ ಬರಬಹುದು. ಅದಕ್ಕೆ ಉತ್ತರ ಮಾರ್ಕಂಡೇಯ ಚರಿತ್ರೆ. 16 ವರ್ಷಕ್ಕೇ ಸಾವು ಎಂದು ಮಾರ್ಕಂಡೇಯನಿಗೆ ಹೇಳಲಾಗಿದೆ. ಅವ ಅಖಂಡವಾಗಿ ಶಿವಾರಾಧನೆಯನ್ನು ಮಾಡಿ ಅಪ ಮೃತ್ಯುವನ್ನು ತಪ್ಪಿಸಿಕೊಂಡು ಚಿರಂಜೀವಿಯಾದ ನೆಂದು ಪುರಾಣ ಹೇಳುತ್ತವೆ. ಹಾಗಾಗಿ ಶಿವಾ ರಾಧನೆಯಿಂದ ಅಪಮೃತ್ಯು ಬಾರದು. ಅಂತಲೇ ಶಿವನಿಗೆ ಮೃತ್ಯುಂಜಯನೆಂಬ ಹೆಸರು ಬಂದಿದೆ.

ಭಕ್ತಿಗೆ, ತಪಸ್ಸಿಗೆ ಅಸಾಧ್ಯವಾದ ವಿಷಯಗಳಿಲ್ಲ. ಪಾತಿವ್ರತ್ಯದಿಂದ ಪ್ರಾರ್ಥನೆಯಿಂದ ಸಾವಿತ್ರಿ ತನ್ನ ಪತಿಯನ್ನು ಅಪಮೃತ್ಯುವಿನಿಂದ

ಮೂಲ :

**ಡಾ॥ ಡಿ. ಅರ್ಕಸೋಮಯಾಜಿ**

ಕಾಪಾಡಿದಳು. ಆದ್ದರಿಂದ ವರ್ಷಕ್ಕೊಮ್ಮೆ ಒಂದು ದಿನವಾದರೂ ಉಪವಾಸಮಾಡಿ ರಾತ್ರಿ ಜಾಗರಣೆ ಮಾಡಿ 'ಪರಮೇಶ್ವರಾ ನನಗೆ ದುರ್ಮರಣ ಬಾರದಂತೆ ಮಾಡು' ಎಂದು ಭಕ್ತಿಯಿಂದ ಶಿವನನ್ನು ಆರಾಧಿಸಲೆಂದು ಆ ದಿನಕ್ಕೆ ಶಿವರಾತ್ರಿ ಎಂದು ಹೆಸರು ನೀಡಿದರು. ದಿನವೂ ತಿನ್ನುತ್ತೇವೆ, ದಿನವೂ ನಿದ್ದೆ ಮಾಡುತ್ತೇವೆ. ಒಂದು ದಿ ನ ವಾ ದ ರೂ ನಿದ್ರಾಹಾರಗಳನ್ನು ವರ್ಜಿಸಿ ಈಶ್ವರಾಧನೆಯನ್ನು ಮಾಡಬೇಕೆಂದು ಋಷಿಗಳು ತಿಳಿಸಿದರು.

ವೇದಗಳಲ್ಲಿ ರುದ್ರಾಧ್ಯಾಯವೆಂಬುದೊಂದಿದೆ. ಆ ಅಧ್ಯಾಯಾಂತದಲ್ಲಿ ರುದ್ರಶಕ್ತಿಯು ಮನುಷ್ಯನಿಗೆ ಹೇಗೆ ಮರಣವನ್ನುಂಟು ಮಾಡುವುದೆಂದು ವಿವರಿತವಾಗಿದೆ. ನಾವು ಕುಡಿಯುವ ನೀರಿನಿಂದ ಕಾಲರಾದಂತಹ ರೋಗ ಬಂದು ಮರಣಿಸಬಹುದು. ಸಿಡುಬಿನಂತಹ ರೋಗದಿಂದ ಸಾಯಬಹುದು. ತಿನ್ನುವ ಅನ್ನದ ಮೂಲಕ ಕ್ರಿಮಿಗಳು ಜಠರವನ್ನು ಪ್ರವೇಶಿಸಿ ಅದನ್ನು ಹಾಳುಮಾಡಿ ಮರಣವನ್ನು ತರಬಹುದು. ಕತ್ತಲಿನಲ್ಲಿ ನಡೆಯುವಲ್ಲಿ ಹಾವು ಕಚ್ಚಿ ಸಾಯಬಹುದು. ಇವುಗಳೆಲ್ಲ ಜನ್ಮಾಂತರ ದುಷ್ಕೃತಿಯಮೂಲಕ ಸಂಭವಿಸುವುವು. ಹಾಗಾಗಿ ಮರಣದ ಅಧಿದೇವತೆಯಾದ ಶಿವನನ್ನು ಪ್ರಾರ್ಥಿಸಲು ಶಿವರಾತ್ರಿ ಎಂಬ ಒಂದು ದಿನವನ್ನು ಗೊತ್ತು ಮಾಡಿದರು ಹಿರಿಯರು.

ಸಾವು ಎಂದಲ್ಲಿ ಭಯವಿಲ್ಲದವರಿಲ್ಲ. ಅಂತಹವರು ಸರ್ವಸಂಗ ಪರಿತ್ಯಾಗ ಮಾಡಿದ ಪರಮ ಹಂಸ ಪರಿವ್ರಾಜಕರಲ್ಲಿ ಕೋಟಿಗೆ ಒಬ್ಬರಿರಬಹುದು. ಅಂತಹವರು ಇಂದೂ ಇದ್ದಾರೆ. ಅಂತಹವರ ಹೊರತು ಮಿಕ್ಕಂತೆ ಅಸ್ಮದಾದಿಗಳಿಗೆಲ್ಲ ಸಾವು ಎಂದರೆ ಹೇಳತೀರದ ಭಯ. ಆ ಸಾವು ನಮ್ಮ ಕೈಯ್ಯಲಿಲ್ಲ ಎಂಬುದನ್ನು ತಿಳಿದೂ ಕೂಡ ಮರಣದಿಂದ ಕಾಪಾಡುವ ಶಿವನನ್ನು ಆರಾಧಿಸುವ ಭಾವವುಂಟಾಗದಿದ್ದಲ್ಲಿ ಜನ್ಮಾಂತರ ದುಷ್ಕೃತವೇ ದುರ್ಮರಣವನ್ನುಂಟು ಮಾಡುತ್ತದೆ. The law takes its own corce ಎಂದಂತೆ ಜನ್ಮಾಂತರ ದುಷ್ಕೃತ ಪ್ರಬಲವಾಗುತ್ತದೆ. ಈ ದುಷ್ಕೃತ ಪರಿಪಾಕವನ್ನು ಶಿವಾರಾಧನೆಯಿಂದ ತಪ್ಪಿಸಿಕೊಳ್ಳಬಹುದೆಂದು ಮಹರ್ಷಿಗಳ ಅಭಿಪ್ರಾಯ. 'ಜಗತ್ತು ಕನಸಿನಲ್ಲೂ ಎಣಿಸದಷ್ಟು ವಿಷಯಗಳನ್ನು ಪ್ರಾರ್ಥನೆಯಿಂದ ಸಾಧಿಸಬಹುದು' ಎಂದು ಪಾಶ್ಚಾತ್ಯ ಕವಿ ಟೆನ್ನಿಸನ್ ಎಂಬುವವನು ಹೇಳುತ್ತ ಆದರಿಂದ ಆದಿವ್ಯಾಧಿಗಳನ್ನೂ ಗೆಲ್ಲಬಹುದೆನ್ನುತ್ತಾನೆ. ಈ ವಿಷಯವನ್ನೇ ನಮ್ಮ ಋಷಿಗಳು ಕೊರಳೆತ್ತಿ ಸಾರಿದರು.

ಕಲಿಕಾಲವಶದಿಂದಾಗಿ ನಮ್ಮ ಜೀವನದಲ್ಲಿ ತಪಸ್ಸು ಎಂಬುದನ್ನೇ ಮರೆತಿದ್ದೇವೆ. ಆನಂದ ಭಾಷ್ಪಗಳಿಂದ ಭಗವದಾರಾಧನೆ ಮಾಡುವರು ಕಡಿಮೆಯಾದರು. ಸ್ವಯತ್ನದಿಂದ ಸಮಸ್ತವನ್ನು ಸಾಧಿಸುವೆನೆಂದುಕೊಳ್ಳುವುದು ಮೂರ್ಖತನ. ಅಂತಹವನಿಗೆ ಭಗವಂತನೇ ಬುದ್ಧಿ ಹೇಳುತ್ತಾನೆ. 'ಎಲಾ ನರ ಮಾನವ ನಿನ್ನ ಸಾಮರ್ಥ್ಯವೇನು ? ನಿನ್ನ ಜನನವಾಗಲೀ ಮರಣವಾಗಲೀ, ನಿನ್ನ ವಿದ್ಯೆ, ಐಶ್ವರ್ಯವಾಗಲೀ, ನಿನ್ನ ಹೆಂಡತಿ ಮಕ್ಕಳಾಗಲೀ ನಿನ್ನ ಸಾಮರ್ಥ್ಯದಿಂದ ಸಿದ್ಧವಾಗವು. ಈ ಮಹಾವಿಶ್ವವನ್ನು ಸೃಷ್ಟಿಸಿ, ಸಂರಕ್ಷಿಸುತ್ತಿರುವ ನನ್ನನ್ನು ತಿಳಿದುಕೊ. ಗರ್ವಹೊಂದದೆ ತಲೆ ಬಾಗಿಸಿ ಆರಾಧನೆಯನ್ನು ಮಾಡು' ಎಂದು ಭಗವದ್ಗೀತೆಯಲ್ಲಿ ಬೋಧಿಸಲಾಗಿದೆ. ವರ್ಷದಲ್ಲಿ 364 ದಿನಗಳನ್ನು ಬಿಟ್ಟು ಒಂದು ದಿನ ಶಿವರಾತ್ರಿಯಂದಾದರೂ ಪರಮೇಶ್ವರನನ್ನು ಕುರಿತು ತಪಸ್ಸು ಮಾಡಲೆಂದು, ಶಿವರಾತ್ರಿಯನ್ನು ಕೇವಲ

## ಅರ್ಧನಾರೀಶ್ವರ ಸ್ತವ

ಅಂಬೋದರ ಶ್ಯಾಮಲ ಕುಂತಲಾಯೈ ತಟಿತ್ಪ್ರಭಾತಾಮ್ರ ಜಟಾಧರಾಯ
ನಿರೀಶ್ವರಾಯೈ ನಿಖಿಲೇಶ್ವರಾಯ ನಮಃ ಶಿವಾಯೈ ಚ ನಮಶ್ಶಿವಾಯ
ಪ್ರದೀಪ್ತರತ್ನೋಜ್ವಲ ಕುಂಡಲಾಯೈ ಸ್ಫುರನ್ಮಹಾ ಪನ್ನಗ ಭೂಷಣಾಯ
ಶಿವಪ್ರಿಯಾಯೈ ಚ ಶಿವಾಪ್ರಿಯಾಯ ನಮಃ ॥
ಮಂದಾರ ಮಾಲಾ ಕಲಿತಾಲಕಾಯೈ ಕಪಾಲ ಮಾಲಾಂಕಿತ ಕಂಧರಾಯ
ದಿವ್ಯಾಂಬರಾಯೈ ಚ ದಿಗಂಬರಾಯ ನಮಃ ॥
ಕಸ್ತೂರಿಕಾ ಕುಂಕುಮ ಲೇಪನಾಯೈ ಸ್ಮಶಾನ ಭಸ್ಮಾಂಗ ವಿಲೇಪನಾಯ
ಕೃತ ಸ್ಮರಾಯೈ ವಿಕೃತಸ್ಮರಾಯ ನಮಃ ॥
ಪಾದಾರವಿಂದಾರ್ಪಿತ ಹಂಸಕಾಯೈ ಪಾದಾಬ್ಜ ರಾಜತ್ಫಣಿ ನೂಪುರಾಯ
ಕಲಾಮಯಾಯೈ ವಿಕಲಾಮಯಾಯ ನಮಃ ॥
ಪ್ರಪಂಚ ಸೃಷ್ಟ್ಯುನ್ಮುಖ ಲಾಸ್ಯಕಾಯೈ ಸಮಸ್ತ ಸಂಹಾರಕ ತಾಂಡವಾಯ
ಜಗಜ್ಜನನ್ಯೈ ಜಗದೇಕ ಪ್ರೀತೇ ನಮಃ ॥
ಪ್ರಫುಲ್ಲ ನೀಲೋತ್ಪಲ ಲೋಚನಾಯೈ ವಿಕಾಸ ಪಂಕೇರುಹ ಲೋಚನಾಯ
ಸಮೇಕ್ಷಣಾಯೈ ವಿಷಮೇಕ್ಷಣಾಯ ನಮಃ ॥
ಅಂತರ್ಬಹಿಶ್ಚೋರ್ಧ್ವಮಧಶ್ಚ ತದ್ವತ್ ಪುರಶ್ಚ ಪಶ್ಚಾಶ್ಚ ವಿದಿಕ್ಷುದಿಕ್ಷು
ಸರ್ವಂಗತಾಯೈ ಸಕಲಂಗತಾಯ ನಮಃ ॥

ತಪಸ್ಸಿಗಾಗಿ ಮೀಸಲಿರಿಸಿದರು ಮಹರ್ಷಿಗಳು. ನಮ್ಮ ಇತರ ಹಬ್ಬಗಳು ಬೇರೆ ಶಿವರಾತ್ರಿಯೇ ಬೇರೆ. ಶಿವರಾತ್ರಿ ಕೇವಲ ಆಧ್ಯಾತ್ಮಿಕ ತತ್ತ್ವಕ್ಕಾಗಿ ಮೀಸಲಾದ ದಿನ.

ಹಾಗಾದಲ್ಲಿ ಮಾಘಬಹುಳ ಚತುರ್ದಶಿಯೇ ಶಿವರಾತ್ರಿ ಎಂದು ಹಿರಿಯರ ಏಕೆ ನಿರ್ಣಯಿಸಿದರು ಎಂಬ ಪ್ರಶ್ನೆಯುಂಟಾಗಬಹುದು. ಅದಕ್ಕೆ ಉತ್ತರ ಸಾಮಾನ್ಯವಾಗಿ ಶೀತಕಾಲದಲ್ಲಿ ಮರಣಗಳು ಹೆಚ್ಚು. ಖಗೋಳಶಾಸ್ತ್ರದ ಪ್ರಕಾರ ಈ ಶೀತ ಕಾಲ ಶಿವರಾತ್ರಿಗೆ ಕೊನೆ. ಶೀತಕಾಲದಲ್ಲಿ ಮರಣದಿಂದ ತಪ್ಪಿಸಿದುದಕ್ಕಾಗಿ ಶಿವನನ್ನು ಪೂಜಿಸಲೆಂದು ಶಿವರಾತ್ರಿಯ ಏರ್ಪಾಡು ಮಾಡಿದರು. ನಮಃಶಿವಾಯ ಎನ್ನುವ ಪಂಚಾಕ್ಷರೀ ಮಂತ್ರ ಅಕಾಲ ದುರ್ಮರಣ ಬಾರದಂತೆ ಕಾಪಾಡುವ ಮಂತ್ರ. ಜ್ಯೋತಿಶ್ಶಾಸ್ತ್ರದಲ್ಲಿ ಮಾರಕ ದೆಶೆ ಎಂದು ಹೇಳಲಾಗಿದೆ. ಎಂದರೆ ತೀವ್ರ ಅನಾರೋಗ್ಯದ ದೆಶೆ. ಈ ಮಾರಕ ದೆಶೆಯಿಂದ ತನ್ನತಾನು ಕಾಪಾಡಿಕೊಳ್ಳಲು ಮೃತ್ಯುಂಜಯ ಮಂತ್ರವನ್ನು ಜಪಿಸಬೇಕೆಂದು ನಾಡೀಗ್ರಂಥಗಳು ಹೇಳುತ್ತವೆ. "ತ್ರ್ಯಂಬಕಂ ಯಜಾಮಹೇ.........ಮೃತ್ಯುವೇ ಸ್ವಾಹಾ, ಮೃತ್ಯುವೇ ಸ್ವಾಹಾ" ಎನ್ನುವ ಮಂತ್ರವೇ ಮೃತ್ಯುಂಜಯ ಮಂತ್ರ. ಈ ಮೂಲಕವಾಗಿ ಅಪಮೃತ್ಯುವನ್ನು ಜಯಿಸಬಹುದಂತೆ. ಆದರೆ ಈ ಮಂತ್ರವನ್ನು ಜಪಿಸದೆಯೇ ಬಹುಮಂದಿ ದೀರ್ಘಾಯುಗಳಿರುವರಲ್ಲ ಎನ್ನುವ ಆಕ್ಷೇಪವೇಳಬಹುದು. ಅಂತಹವರು ಜನ್ಮಾಂತರ ಸುಕೃತ ಹೊಂದಿದವರೆಂಬುದೇ ಸಮಾಧಾನ.

ವನೇ ರಣೇ ಶತ್ರುಜಲಾಗ್ನಿ ಮಧ್ಯೇ
ಮಹಾರ್ಣವೇ ಪರ್ವತಮಸ್ತಕೇ ವಾ
ಸಪ್ತ ಪ್ರಮತ್ತಂ ವಿಷಮಸ್ಥಿತಂ ವಾ
ರಕ್ಷಂತಿ ಪುಣ್ಯಾನಿ ಪುರಾಕೃತಾನಿ

–ಎಂದರೆ ಮಹಾರಣ್ಯದಲ್ಲಾಗಲೀ, ಯುದ್ಧದಲ್ಲಾಗಲೀ, ಶತ್ರುಮಧ್ಯದಲ್ಲಿ ಅಥವಾ ಜಲಮಧ್ಯದಲ್ಲಿಯೋ, ಅಗ್ನಿ ಮಧ್ಯದಲ್ಲಿಯೋ ಮರಣವುಂಟಾಗದೆ ಯಾವನಾದರೂ ಬದುಕಿದನೆಂದರೆ ಅದಕ್ಕೆ ಕಾರಣ ಅವನ ಪೂರ್ವಕೃತ ಪುಣ್ಯ. ಮಾನವನನ್ನು ಇಹಲೋಕದಲ್ಲಿ ನಡೆಸುವಂತಹವು ಎರಡು. (1) ಪೂರ್ವಜನ್ಮ ಸುಕೃತ (2) ಈ ಜನ್ಮದಲ್ಲಿ ನಡೆಸುತ್ತಿರುವ ಭಗವದಾರಾಧನೆಯ ಮೂಲಕ ಉಂಟಾಗುವ ದೈವಾನುಗ್ರಹ. ಜನ್ಮಾಂತರ ಸುಕೃತವನ್ನು ಈ ಜನ್ಮದಲ್ಲಿ ಪರಿವರ್ತಿಸಲಾಗದು. ಆದರೆ ಭಗವದಾರಾಧನೆಯಿಂದ ದೈವಾನುಗ್ರಹವನ್ನು ಸಂಪಾದಿಸಬಹುದು. ನಮಗೆ ಪರಮೇಶ್ವರನು ದೇಹವನ್ನಿತ್ತು, ವಿದ್ಯೆ, ಸಂಪತ್ತು, ಇಂದ್ರಿಯಗಳು, ಎಲ್ಲವನ್ನು ನೀಡಿದರೂ ಅವನನ್ನು ಕೃತಜ್ಞತೆಯಿಂದ ಕೈಯೆತ್ತಿ ನಮಸ್ಕರಿಸದ ಮಾನವನು ಪಶುಸಮಾನನಾಗುವನು.

ಶಿವಾನಂದಲಹರಿಯಲ್ಲಿ ಶಂಕರ ಭಗವತ್ಪಾದರು ಒಂದು ಉತ್ಕೃಷ್ಟ ಶ್ಲೋಕವನ್ನು ರಚಿಸಿದ್ದಾರೆ "ಮಾರ್ಗಾವರ್ತಿತ ಪಾದುಕಾಃ..........." ಎಂಬುದಾಗಿ. ಒಬ್ಬ ಬೋವಿ ಮಹಾಭಕ್ತನಾಗಿದ್ದ. ನಿತ್ಯ ಶಿವಪೂಜೆ ಮಾಡುತ್ತಿದ್ದ. ಶಿವಲಿಂಗದ ಬಳಿಗೆ ಹೋಗಿ ತನ್ನ ಪಾದರಕ್ಷೆಯಿಂದ ಶಿವನಿರ್ಮಾಲ್ಯವನ್ನು ಒರೆಸಿಹಾಕಿ ನೀರಿನಿಂದ ಶಿವನಿಗೆ ಅಭಿಷೇಕ ಮಾಡಿ ತಾನು ಸ್ವಲ್ಪತಿಂದು ರುಚಿಯಾಗಿದೆಯೆಂದು ತಿಳಿದ ಮಾಂಸವನ್ನು ಶಿವನಿಗೆ ನಿವೇದನೆ ಮಾಡುತ್ತಿದ್ದನಂತೆ. ಅವನಿಗೆ ಶಿವನು ಸಾಕ್ಷಾತ್ಕರಿಸಿದನೆಂದು ಹೇಳುತ್ತ ಶಂಕರರು "ಭಕ್ತಿಃ ಕಿಂ ನಕರೋತಿ, ಅಹೋ ವನಚರೋ ಭಕ್ತಾವತಂಸಾಯತೇ" ಎಂದರು. ಭಕ್ತಿ ಯಾವುದನ್ನು ಸಾಧಿಸದು, ವನಚರನೂ ಭಕ್ತಾವಂತಂಸನಾದನಲ್ಲ ಎಂದು ಬರೆದರು.

ಹಾಗಾಗಿ ಭಾರತೀಯರಾದ ನಾವು ತಿಳಿದುಕೊಳ್ಳ ತಕ್ಕದ್ದು, ಹಿಂದೂ ಧರ್ಮವು ಇತರ ಧರ್ಮಗಳಂತೆ ಕೇವಲ ನೀತಿಯನ್ನು ಮಾತ್ರವೇ ಬೋಧಿಸದು. ಜೀವನ ರಹಸ್ಯಗಳನ್ನು ಕುರಿತು ಉಪನಿಷತ್ತುಗಳು ತರ್ಕಿಸಿದವು. ಉಪನಿಷತ್ಸಾರವನ್ನೇ ವೇದವ್ಯಾಸರು ಬ್ರಹ್ಮಸೂತ್ರಗಳಲ್ಲಿ ತಿಳಿಸಿದರು. ಅವುಗಳ ಸಾರಾಂಶವೇ ಭಗವದ್ಗೀತೆ. ಉಪನಿಷತ್‌ಗಳು, ಬ್ರಹ್ಮಸೂತ್ರ, ಭಗವದ್ಗೀತೆ – ಈ ಮೂರನ್ನೂ ಪ್ರಸ್ಥಾನತ್ರಯಗಳೆಂದರು. ಈ ಪ್ರಸ್ಥಾನತ್ರಯಕ್ಕೇ ವೇದಾಂತ ಶಾಸ್ತ್ರವೆಂಬ ಹೆಸರು. ಹಾಗಾಗಿ ವೇದಗಳ ಸಾರವೇ ವೇದಾಂತ ಶಾಸ್ತ್ರ. ಕೇವಲ ನೀತಿಸೂತ್ರ ಬೋಧಕವಲ್ಲದೆ ವೇದಾಂತಶಾಸ್ತ್ರ ಮೂಲಕ ವಾದದ್ದು ನಮ್ಮ ಹಿಂದೂ ಧರ್ಮ. ನಾವು ಬಹುಮಟ್ಟಿಗೆ ಪಾಶ್ಚಾತ್ಯ ವಿದ್ಯಾ

( 32 ನೇ ಪುಟ ನೋಡಿ )

## ಚಂದ್ರಶೇಖರ ಸ್ತೋತ್ರ

ಚಂದ್ರಶೇಖರ ಚಂದ್ರಶೇಖರ ಚಂದ್ರಶೇಖರ ಪಾಹಿಮಾಂ
ಚಂದ್ರಶೇಖರ ಚಂದ್ರಶೇಖರ ಚಂದ್ರಶೇಖರ ರಕ್ಷಮಾಂ
ರತ್ನಸಾನು ಶರಾಸನಂ ರಜತಾದ್ರಿ ಶೃಂಗನಿಕೇತನಂ
ಶಿಂಜಿನೀಕೃತ ಪನ್ನಗೇಶ್ವರಮಚ್ಯುತ ಸಾಯಕಂ
ಕ್ಷಿಪ್ರದಗ್ಧ ಪುರತ್ರಯಂ ತ್ರಿದಿವಾಲಯೈರಭಿವಂದಿತಂ
ಚಂದ್ರಶೇಖರಮಾಶ್ರಯೇ ಮಮಕಿಂ ಕರಿಷ್ಯತಿ ವೈಯಸಃ

# ಷೋಡಶ ಸಂಸ್ಕಾರಗಳು

**ಶ್ರೀ ಎಸ್. ರಾಮಕೃಷ್ಣ**

ಈ ಜಗತ್ ಸೃಷ್ಟಿಯಲ್ಲಿ ಜನಿಸಿ ಜೀವಿಸುವ ಪ್ರಾಣಿಗಳ ವರ್ಗದಲ್ಲಿ ಮನುಷ್ಯ ಜೀವಿಯು ಸರ್ವಶ್ರೇಷ್ಠನೆಂದು ಪರಿಗಣಿಸಲ್ಪಟ್ಟಿದ್ದಾನೆ. ಇತರ ಜೀವರಾಶಿಗಳ ಆ ವಿಚಿತ್ರರೂಪ ಅದ್ಭುತಶಕ್ತಿಗಳಿಗೆ ಹೋಲಿಸಿದರೆ ಈ ಮಾನವ ಜೀವಿಯು ಕೇವಲ, ಉದಾಹರಣೆಗೆ ಹೇಳುವುದಾದರೆ–ಆನೆಯಂತೆ ಬಲವಾಗಲೀ, ಮೀನಿನಂತೆ ಈಜುವುದಾಗಲೀ, ಹಕ್ಕಿಯಂತೆ ಹಾರುವುದಾಗಲೀ ಜಿಂಕೆಯಂತೆ, ಓಡುವುದಾಗಲೀ, ಯಾವುದರಲ್ಲೂ ಸರಿಸಮನೆನಿಸಲಾರ. ಆದರೆ ಇವುಗಳನ್ನು ತನ್ನ ಕೈ ಚಳಕದಿಂದ ಹಿಡಿಯುವ ಸಾಮರ್ಥ್ಯವನ್ನೂ ಅವುಗಳನ್ನು ಪಳಗಿಸಿ ತನಗೆ ಬೇಕಾದ ರೀತಿಯಲ್ಲಿ ಉಪಯೋಗಿಸಿಕೊಳ್ಳಬಲ್ಲ ಉಪಯುಕ್ತವಾದ ಬುದ್ಧಿಬಲವನ್ನೂ ಹೊಂದಿರುವುದರಿಂದಲೇ ಇವುಗಳೆಲ್ಲಕ್ಕಿಂತ ಶ್ರೇಷ್ಠನೆಂದೆನಿಸಲ್ಪಟ್ಟಿರುತ್ತಾನೆ. ಇದನ್ನೇ ;

ಆಹಾರ ನಿದ್ರಾ ಭಯ ಮೈಥುನಂಚ
ಸಮಾನಮೇತತ್
ಪಶುಭಿಃ ನರಾಣಾಂ ನರಾಣಾಂ
ಜ್ಞಾನಮ ಧಿಕೋ ವಿಶೇಷಃ
ತತ್ ಜ್ಞಾನೇನ ವಿಹೀನಃ ಪಶುಭಿಃ
ಸಮಾನ

ಎಂದಿರುವುದು. ಹಸಿವು, ಬಾಯಾರಿಕೆ, ಸುಖದ ಬಯಕೆ, ಭಯ, ಕ್ರೋಧಗಳು, ಪಶುಗಳಿಗೂ ಮಾನವನಿಗೂ ಸಮಾನವಾಗಿರುವುದು ಸಹಜವಾದರೂ ಪೂರ್ವಾಪರ ಯೋಚನಾಯುಕ್ತನಾಗಿ ಹಿತ ಅಹಿತವನ್ನು ಅರಿತವನಾಗಿ ಕಾರ್ಯವನ್ನು ಮಾಡುವ ವಿವೇಚನೆ (ಜ್ಞಾನ) ಇರುವುದರಿಂದಲೇ ಮನುಷ್ಯನೆನಿಸಿದ್ದಾನೆ. ಹಾಗಿಲ್ಲದೆ ಬಯಕೆಗಳು ಉಂಟಾಗುತ್ತಿದ್ದ ಹಾಗೆಯೇ ಅವುಗಳನ್ನು ಪೂರೈಸಿಕೊಳ್ಳುವುದರಲ್ಲೇ ಉದ್ವಿಗ್ನನಾದರೆ ಅವನು ಮೃಗಕ್ಕೆ ಸಮಾನನೇ ಸರಿ–ಆದರೆ ?

ಮಾನವನ ಯೋಚನೆಯು ಮೊದಲಿನಿಂದ ಇಂದಿನವರೆವಿಗೂ ಮುಂದೆಗೂ ಎಂದೆಂದಿಗೂ ಸುಖಾನ್ವೇಷಣೆಯ ಪಥದಲ್ಲಿ ಮುನ್ನಡೆಯುತ್ತ ಮುಂದುವರೆಯುತ್ತಿದೆ. ಪ್ರತಿಯೊಂದು ಜೀವರಾಶಿಯೂ ಬಯಸುವುದು ಸುಖವನ್ನೇ. ಯಾರೂ ಅಹಿತವನ್ನಾಗಲೀ ದುಃಖವನ್ನಾಗಲೀ ಬಯಸುವುದಿಲ್ಲ. ಆದರೂ ಪ್ರತಿಯೊಬ್ಬರೂ ಒಂದಲ್ಲ ಒಂದು ವಿಧದಲ್ಲಿ ದುಃಖಿತರಾಗಿಯೇ ಇರುವುದು ಪ್ರಮಾಣ ಸತ್ಯವಾಗಿದೆ. ಯಾರೂ ಈವರೆವಿಗೆ ನಾನು ಪೂರ್ಣ ಸುಖಾನಂದದಲ್ಲಿ ಇದ್ದೇನೆ ಎಂದು ಸಮರ್ಥಿಸಲಾರರು. ಇದರ ಮೂಲ ರಹಸ್ಯವೇನೆಂದರೆ ನಾವು ಸುಖವನ್ನು ಬಯಸುತ್ತಿರುವುದು ಸತ್ಯವಾದರೂ ನಿಜವಾದ ಸುಖವೆಂದರೇನು ? ಎನ್ನುವುದನ್ನು ಅರಿಯದೆ, ಇಲ್ಲದೇ ಇರುವುದನ್ನು ಕುರಿತು ಬಯಸುತ್ತಿರುವುದೇ ಆಗಿ, ಅದರಿಂದ ಕ್ಷಣಿಕವಾದ ಅನುಭವವನ್ನು ಪಡೆಯುವುದೇ ಆಗಿದೆ. ಇದನ್ನೇ ಸತ್ಯವೆಂದು ಭ್ರಮಿಸಿ ನಾವು ಶಾಶ್ವತವಾದ ಸುಖವನ್ನು ಅನುಭವಿಸಲು ಅಸಮರ್ಥರಾಗಿದ್ದೇವೆ. ಸತ್ಯ ಶಾಶ್ವತವಾದ ಆನಂದವು ಪ್ರಾಪ್ತವಾಗಬೇಕಾದಲ್ಲಿ ಬಯಸುತ್ತಿರುವ ಸುಖವನ್ನಾಗಲೀ ಹೊಂದಬೇಕಾದಲ್ಲಿ ಅದನ್ನು ಪಡೆದು ಅನುಭವಿಸುವ ರೀತಿಯನ್ನು, ಮಾರ್ಗವನ್ನು ಸಮರ್ಥವಾದ ನಿರ್ದೇಶವನ್ನು ನೀಡುವ ಆಧಾರಭೂತವಾದ ಅನುಭವ ಪೂರ್ಣವಾದ ವ್ಯಕ್ತಿಯ ಉಪದೇಶವು ಅವಶ್ಯಕ. ಅದರಂತೆ ತಾನು ಅನುಭವಿಸಿದ ಸುಖವನ್ನು ಆನಂದವನ್ನು ಸಮಸ್ತ ಮನುಷ್ಯ ಜೀವಿಗಳೆಲ್ಲರೂ ಅನುಭವಿಸಿ ಸುಖಾನಂದವನ್ನು ಹೊಂದಲಿ ಎಂಬ ಮಹತ್ವಪೂರ್ಣವಾದ ಸದುದ್ದೇಶದಿಂದ ಬರೆದು ಕಾಪಾಡಿಕೊಂಡು ಬಂದಿರುವ, ಮಾರ್ಗದರ್ಶನವನ್ನು ನೀಡುವ ಕೈಪಿಡಿಗಳೇ ಈ ದಿವಸ ನಾವು ಕರೆಯುವ ವೇದ, ಶಾಸ್ತ್ರ, ಪುರಾಣ ಇತಿಹಾಸಗಳು. ನಾವು ಬಯಸುವ ಸುಖವು ಅನಂತವಾಗಿರಬೇಕು ಅದು ಶಾಶ್ವತವಾಗಿರಬೇಕು ಎಂಬ ಮನೋಬಯಕೆಯು ಸರ್ವಥಾ ಸರ್ವರೂ ಬಯಸುವುದು ಸಹಜ. ಆದರೆ ಮೇಲೆ ತಿಳಿಸಿದಂತೆ ಪ್ರತಿಯೊಂದು ಕಾರ್ಯಾಚರಣೆಗೂ ಒಂದು ಮಾರ್ಗದರ್ಶನ ನೀಡುವ ಕ್ರಮವಿದ್ದೇ ಇದೆ- ಮಾನವನ ಹಿತವನ್ನೂ ಸುಖವನ್ನೂ ಕುರಿತು ಬರೆದಿರುವ ಗ್ರಂಥಗಳೇ ಶಾಸ್ತ್ರ, ವೇದ, ಸಂಹಿತೆಗಳು. ನಾವು ಸುಖವನ್ನು ಆನಂದವನ್ನೂ ಅಪೇಕ್ಷಿಸುವುದು ಸತ್ಯ. ಇದನ್ನು ಪಡೆಯಲು ಬೇಕಾದ ಕಾರ್ಯವನ್ನು ವಸ್ತು ಸಾಮಗ್ರಿಗಳನ್ನು ಕುರಿತು ತಿಳಿಸಿರುವ ಶಾಸ್ತ್ರಗಳೂ ಸತ್ಯ. ಆದರೆ ನಾವು ಸುಖವನ್ನು ಬೇಡುತ್ತೇವೆ. ಅದಕ್ಕೆ ಸಮಾನವಾದ ಕಾರ್ಯ (ಕರ್ಮ)ವನ್ನು ಮಾಡಲು ಬೇಸರಿಸುತ್ತೇವೆ. ಇದರಿಂದ ದುಃಖಿತರಾಗುತ್ತೇವೆ, ಪುನಃ ಅದೇ ವೇದ ಶಾಸ್ತ್ರಗಳನ್ನು ಉಪೇಕ್ಷಿಸಿ ನಿರ್ಲಕ್ಷಿಸಿ, ತೆಗಳಿ ವಿಜ್ಞಾನದ ಮಾತುಗಳನ್ನು ಬಲ್ಲವರಂತೆ ಮಾತನಾಡುತ್ತೇವೆ. ಯಾರು ಅರಿತು ಆಚರಿಸುತ್ತಾರೋ ಅವರು ನಿಸ್ಸಂದೇಹವಾಗಿ ಸುಖಾನಂದವನ್ನು ಹೊಂದುವುದರಲ್ಲಿ ಸಂಶಯವಿಲ್ಲ. ಸುಖವೆಂದರೇನು ? ಎಂಬುದನ್ನೂ ದುಃಖವೆಂದರೇನು ? ಎಂಬುದನ್ನೂ ಈ ಸುಖದುಃಖಗಳ ಗುಣಗಳನ್ನು ಪೂರ್ಣವಾಗಿ ಅರಿತದ್ದೇ ಆದರೆ, ಆಗ ಮಾತ್ರ ನಾವು ನಿಜವಾದ ಸುಖವನ್ನು ಅರಿತು ಆನಂದಿಸಲು ಅವಕಾಶವಾಗುತ್ತದೆ.

ಸುಖವೆಂದರೆ ಇಚ್ಛಾಪ್ರಾಪ್ತಿಯೆಂದೂ ದುಃಖವೆಂದರೆ ಅನಿಷ್ಟ ನಿವಾರಣೆ ಎಂಬುದಾಗಿಯೂ ನಮ್ಮ ಶಾಸ್ತ್ರಗಳು ತಿಳಿಸಿರುತ್ತವೆ. ಇವೆರಡಲ್ಲಿ ನಾವು ಯಾವ ಒಂದು ಗುಣದ ಅನುಭವವನ್ನು ಪಡೆಯಲು ಸಂಕಲ್ಪಿಸಿ ಶಾಸ್ತ್ರೋಕ್ತವಾದ ಕರ್ಮ ಆಚರಣೆಯಲ್ಲಿ ತೊಡಗಿದೆವೆಂದರೆ ಇವೆರಡರ ಫಲವೂ ಪ್ರಾಪ್ತವಾಗುತ್ತದೆ. ದುಃಖ ನಿವಾರಣೆಯೇ ಸುಖ ಪ್ರಾಪ್ತಿ, ಸುಖ ಪ್ರಾಪ್ತಿಯೇ ದುಃಖ ನಿವಾರಣೆ. ಶಾಸ್ತ್ರವೆಂದರೆ ಏನೋ ಮೂಗೆಳೆಯುವುದಲ್ಲ. ಮೇಲೆ ತಿಳಿಸಿದಂತೆ ಸುಖಿಗಳಾಗಿರುವಂತೆ ಮಾಡಲೂ ಮತ್ತು

ಪ್ರಕೃತಿ ಸಂಬಂಧವಾದ ತೊಂದರೆಗಳುಂಟಾದರೆ ಅವುಗಳ ನಿವಾರಣೋಪಾಯವನ್ನು ಅದರ ಕ್ರಮವನ್ನು ತಿಳಿಸುವುದೇ ಆಗಿದೆ. ಇದೇ ಉತ್ತಮ ಮಾರ್ಗದರ್ಶನವು. ಸನಾತನ ಹಿಂದೂ ಧರ್ಮದ ಪರಂಪರೆಯಲ್ಲಿ ಈ ಆಚರಣೆಯು ಜನಿಸಿದ ಮೊದಲ ದಿನದಿಂದ ಹಿಡಿದು ದೇಹವು ನಶಿಸಿ ಅಗ್ನಿಯಲ್ಲಿ ಭಸ್ಮವಾಗುವವರೆವಿಗೂ ಅರ್ಥಾತ್ ಮಣ್ಣಿನಿಂದ ಬಂದ ಮಾಯಾಮೋಹಕವಾದ ಈ ದೇಹವು ಪುನಃ ಮಣ್ಣಿನ ಪಾಲಾಗುವವರೆವಿಗೂ ಶಾಸ್ತ್ರವು ಹೆಜ್ಜೆ ಹೆಜ್ಜೆಗೆ ಹಿತವಾದ ಕರ್ಮವನ್ನು ತಿಳಿಸಿರುತ್ತದೆ. ಇದನ್ನೇ ಸಂಸ್ಕಾರವೆಂದು ಕರೆಯುವುದು. ಸಂಸ್ಕಾರವೆಂದರೆ ಶುದ್ಧೀಕರಣ. ಶಾಸ್ತ್ರೋಕ್ತವಾದ ರೀತಿಯಲ್ಲಿ ಕರ್ಮವನ್ನು ಆಚರಿಸಿ ಉತ್ತಮ ಜೀವನದ ರೀತಿಗೆ ಅರ್ಹತೆಯನ್ನು ಪಡೆಯುವುದು ಎಂದು ತಿಳಿಸುವುದೇ ಆಗಿದೆ. ನಾನು ಎಂದು ಹೇಳಿಕೊಳ್ಳುವ ಈ ದೇಹವೇ ಮೊದಲುಗೊಂಡು ಇಡೀ ವಿಶ್ವವೇ ಕಾಣಲಾಗದ, ವರ್ಣಿಸಲಾಗದ ಮತ್ತು ಇವುಗಳಿಗಿಂತ ಅಧಿಕವಾದ ಮಹತ್ತರವಾದ ಒಂದು ಶಕ್ತಿ ಏನಿದೆಯೋ – ಅದನ್ನೇ ಭಗವಂತನೆಂದು, ಪೂಜಾರ್ಹನಾದ ಪರಮಾತ್ಮನೆಂದು ಕರೆದು, ತನ್ನ ಯೋಗೈಶ್ವರ್ಯದಿಂದ ವಿಶ್ವನಿಯಾಮಕನಾಗಿ, ವಿಶ್ವಪಾಲಕನಾಗಿ, ಸರ್ವಭೂತಾಂತರಾತ್ಮನಾಗಿ ವಿಶ್ವತಃ ಸರ್ವತೋಮುಖನಾಗಿರುವ ಭಗವಂತನನ್ನು ಪ್ರಾರ್ಥಿಸಿ ನಮ್ಮ ಶುಭಾಶುಭ ಫಲಗಳನ್ನು ಅವನಿಗೇ ಅರ್ಪಿಸಿ ಅವನ ಸಾಕ್ಷಿಯಾಗಿ ಆಚರಿಸುವುದರ ಮೂಲಕ ನಮ್ಮ ಕಾರ್ಯಗಳು ಆರಂಭವಾಗುವುವು. ಇದನ್ನೇ ಎಲ್ಲ ಕಾರ್ಯಗಳ ಪ್ರಥಮದಲ್ಲಿ ನಾವು "ಶ್ರೀ ಪರಮೇಶ್ವರ ಪ್ರೀತ್ಯರ್ಥಂ" ಎಂದು ಪ್ರಾರಂಭಿಸುತ್ತೇವೆ. ಸಮಸ್ತ ದುರಿತ ವಿಷಯಗಳು ನಿವಾರಣೆಯಾಗಿ ಪುಣ್ಯಪ್ರದವಾದ ಲೋಕಹಿತವಾದ ಕಾರ್ಯವು ಜರುಗಲೆಂದೇ ಪ್ರಪ್ರಥಮವಾಗಿ ಹದಿನಾರು ಸಂಸ್ಕಾರಗಳು ಈ ಪೂಜೆ ಮೊದಲುಗೊಂಡು ಕೈಗೊಳ್ಳಲ್ಪಡುವುವು.

೧. ಮಹಾಗಣಪತಿ ಪೂಜೆ:— ಮಾಡುವ ಕಾರ್ಯದಲ್ಲಿ ತೊಂದರೆಗಳು ನಿವಾರಣೆಯಾಗಲೆಂದು ಮತ್ತು ಸಮಸ್ತ ಕಾರ್ಯಗಳಿಗೆ ಪ್ರಥಮವಾಗಿ ನಾವು ಸರ್ವ ಕರ್ತನಾದ ಭಗವಂತನ ಕೃಪೆಗೆ ಪಾತ್ರರಾಗಲೆಂದು ಭಕ್ತಿಯಿಂದ ಅರ್ಪಿಸುವ ಅರ್ಚನೆಯೇ ಈ ಮಹಾಗಣಪತಿ ಪೂಜೆ (ದೇವರನ್ನು ಸಾರಿರುವುದರ ಸಂಕೇತ)

೨. ಪುಣ್ಯಾಹವಾಚನ:— ಜೀವನದ ದಿವಸಗಳಲ್ಲಿ ಜೀವಿಯಿಂದ ಪುಣ್ಯಪ್ರದವಾದ ಕಾರ್ಯಗಳು ನೆರವೇರಿಸಲ್ಪಟ್ಟು ಕರ್ತೃವಿಗೂ ಅವನ ಕುಟುಂಬಕ್ಕೂ ಶ್ರೇಯಃ ಪ್ರಾಪ್ತವಾಗಲೆಂದು ಮಂತ್ರಪೂರ್ವಕವಾಗಿ ಕರ್ಮಾನುಷ್ಠಾನದ ಋತ್ವಿಕರುಗಳಿಂದ ಆಶೀರ್ವಾದ. (ಇದು ಗುರುಹಿರಿಯರಿಗೆ ಶರಣಾಗತರಾಗುವ ಸಂಕೇತ.)

೩. ಮಾತೃಕಾಪೂಜನ:— ತನ್ನ ಹಿರಿಯರಿಂದ ಪರಂಪರಾನುಗತವಾಗಿ ಆಚರಿಸಿಕೊಂಡು ಬಂದಿರುವ ತನ್ನ ಕುಲದೇವತೆಯ ಹೆಸರಿನಲ್ಲಿ ಆಚರಿಸುವ ಪೂಜಾಂಗ (ಅಥವ ಸುಮಂಗಲೀ ಪೂಜೆ) ಇದು ಸನಾತನ ಧರ್ಮದಲ್ಲಿ ಸ್ತ್ರೀಯರಿಗೆ ಕೊಡಬೇಕಾದ ಗೌರವಸ್ಥಾನದ ಸಂಕೇತವಾಗಿ ಕೈಗೊಳ್ಳುವ ಕಾರ್ಯ.

೪. ವೇದವ್ರತ:— ಶಿಷ್ಯನಾದವನು ಗುರುಮುಖೇನ ವೇದಾಧ್ಯಯನವನ್ನು ಪೂರ್ಣಗೊಳಿಸಿಕೊಂಡು ಪ್ರಾಜ್ಞನಾದುದರ ಸಂಕೇತವಾಗಿ ತನ್ನ ಗೌರವವನ್ನು ಸೂಚಿಸಲು ಕೊಡುವ ಕಾಣಿಕೆ ದಕ್ಷಿಣಾ ರೂಪವಾಗಿ ಯಥಾಶಕ್ತಿ ಪ್ರತಿಫಲವಾಗಿ ಕೊಡುವ ದಾನ. ಈಗ ಈ ಕಾರ್ಯವು ಆಚರಣೆಯಲ್ಲಿರುವುದು ಕಂಡುಬರುತ್ತಿಲ್ಲ. ಏಕೆಂದರೆ ಹಿಂದಿನ ಕಾಲದಲ್ಲಿ ವಿದ್ಯಾರ್ಜನೆಗೆ ಈಗಿನಂತೆ ಶಾಲೆಯಾಗಲೀ ಅಥವ ಸುಲಭವಾಗಿ ಬರೆದುಕೊಳ್ಳಲು ಹಾಳೆಗಳಾಗಲೀ ಮುದ್ರಣವಾಗಲೀ ಇರಲಿಲ್ಲ. ಗುರುಮುಖೇನ ಬಾಯಿ ಪಾಠ ಮಾಡಿ ಒಪ್ಪಿಸಬೇಕಾದ ಕ್ರಮವಿದ್ದುದರಿಂದ ಈ ಕ್ರಮ ಇದ್ದಿರಬಹುದು. ಏನೇ ಆದರೂ ಒಬ್ಬರಿಂದ ಒಂದು ವಿದ್ಯೆಯನ್ನು ಕಲಿತ ಋಣಕ್ಕಾಗಿ ಅವರಿಗೆ ಸಲ್ಲುತ್ತಿದ್ದ ಗೌರವದಾನ.

೫. ಸಮಾವರ್ತನ:— ಗೃಹಸ್ಥಾಶ್ರಮ ಸ್ವೀಕಾರಕ್ಕೆ ಶಿಷ್ಯನಾದವನು ತನ್ನ ಗುರುವಿನಿಂದ ಅಪ್ಪಣೆಪಡೆದು ಸದಾಚಾರಿಯಾಗಿ ಸಕಾಮನೆಗಳನ್ನು ಸ್ವಧರ್ಮದ ಎಲ್ಲೆಯಲ್ಲಿ ಅನುಭವಿಸಿ ದೇಶಕ್ಕೆ ಸತ್‌ಪ್ರಜೆಯನ್ನು ಕೊಡಲು ಬೇಕಾದ ಸೂಕ್ತ ಸಲಹೆಗಳನ್ನು ಪಡೆಯುವ ಕಾರ್ಯಾಂಗ. (ಇದು ಬಾಲ್ಯದಿಂದ ಕಾಲಿರಿಸುತ್ತಿದ್ದ ಹಾಗೇ ತನ್ನ ಇಚ್ಛಾನುಸಾರವಾಗಿ ಅನೇಕರಿಂದ ಬಯಕೆಗಳನ್ನು ಪೂರೈಸಿಕೊಳ್ಳಲು ಮಗ್ನನಾಗದಿರು ಎಂದು ಎಚ್ಚರಿಸಲು ಕೊಡುತ್ತಿದ್ದ ಸಲಹೆಗಳು.

೬. ವಿವಾಹ:— ಮೇಲೆ ತಿಳಿಸಿದಂತೆ ಉತ್ತಮ ಮಾರ್ಗದಲ್ಲಿ ತನ್ನ ಕಾಮನೆಗಳನ್ನು ತೃಪ್ತಿಗೊಳಿಸಿಕೊಳ್ಳುವುದರ ಮೂಲಕ ತನ್ನ ಕುಲಕಸುಬನ್ನು ಇದರಿಂದ ಪಡೆದ ಧನದಿಂದ ಯಥಾವಿಧಿಯಾಗಿ ದೀನರಾದವರಿಗೆ ಕೈಲಾದ ಸಹಾಯವನ್ನು ಮಾಡುವುದರ ಮೂಲಕ ತ್ಯಾಗ ಮನೋಭಾವವನ್ನು ರೂಢಿಸಿಕೊಳ್ಳಲು ಅವಕಾಶ. ಮನುಷ್ಯನಲ್ಲಿ ಪ್ರವೃತ್ತವಾಗುವ ಸ್ವಾರ್ಥವನ್ನು ಸಮಗ್ರವಾಗಿ ನಾಶಗೊಳಿಸಿ ಉತ್ತಮ ಮನೋಭಾವವನ್ನು – ತನ್ನಂತೆ ಪರರು ಎಂಬ ಅನುಭವವನ್ನು ತಂದುಕೊಡುವುದೇ ಆಗಿದೆ.

೭. ಮಂಟಪಸ್ಥಾನ ಪೂಜೆ:— ಯಾವ ಸ್ಥಾನದಲ್ಲಿ ಒಂದು ಕಾರ್ಯವನ್ನು ನಾವು ಆಚರಿಸಬೇಕೆಂದು ಬಯಸಿರುವೆವೋ ಆ ಸ್ಥಳವನ್ನು ಶುದ್ಧೀಕರಿಸುವುದು. ಇದರಿಂದ ತಾನಿರುವ ಜಾಗವು ಶುದ್ಧವಾಗಿರಬೇಕು, ನೈರ್ಮಲ್ಯ ಮನೋಭಾವ ಸಭ್ಯತೆಯನ್ನು ರೂಢಿಸಿಕೊಳ್ಳಲಿ ಎಂದು ಮತ್ತು ಆ ಸ್ಥಳವನ್ನು ನೋಡುತ್ತಿದ್ದ ಹಾಗೆಯೇ ಮನಃ ಸಮಾಧಾನವು, ದೈವೀಕ ಭಾವವು ಉಂಟಾಗಲೆಂದು ಮಾಡುವ ಪೂಜಾಕಾರ್ಯ.

೮. ನಾಂದೀಕಾರ್ಯ:— ನಾಂದಿ ಎಂದರೆ ಪ್ರಾರಂಭ ಅಥವಾ ಮೊದಲು ಎಂಬ ಅರ್ಥದಲ್ಲಿ ಹೇಳಿದ, ಶುಭಕಾರ್ಯವನ್ನು ಆಚರಿಸುವ ಮೊದಲು ಕರ್ತೃವಾದವನು ತನ್ನ ಹಿರಿಯರಿಗೆ ಸಲ್ಲಿಸಬೇಕಾದ ಪೂಜೆ ಗೌರವ. ಇದು ಪ್ರತಿ ಪುಣ್ಯ ಕರ್ಮದ ಮೊದಲು ತನ್ನ ವಂಶಜರನ್ನು ಸ್ಮರಿಸಿಕೊಳ್ಳಲು ಮಾಡಿರುವ ಸದಾವಕಾಶ ರೂಪವಾದ ಕಾರ್ಯವಾಗಿದೆ.

೯. ಗರ್ಭಾದಾನ:— ಪುತ್ರಾಪೇಕ್ಷೆಯಿಂದ ಸತ್ಪುತ್ರರು ಜನಿಸಿ ಕುಲಗೌರವ

(31ನೇ ಪುಟ ನೋಡಿ)

# ಶ್ರೀ ಮಧ್ವಾಚಾರ್ಯರು

ಬಾದರಾಯಣರು ಅಪೌರುಷೇಯವಾದ ಜಟಿಲ ಪ್ರಶ್ನೆಗಳನ್ನು ಬಿಡಿಸಿ ಸಿದ್ಧಾಂತ ವನ್ನು ತಿಳಿಸುವುದಕ್ಕಾಗಿ ವೇದಗಳು ಮುಖ್ಯ ವಾಗಿ ತಿಳಿಸುವ ವಿಷಯಗಳನ್ನು ಸಂಗ್ರಹಿಸಿ ಅರುನೂರಾ ಮೂವತ್ತು ಬ್ರಹ್ಮಸೂತ್ರಗ ಳನ್ನು ರಚಿಸಿದರು.

ಕ್ರಿಸ್ತ ಪೂರ್ವಕಾಲದಲ್ಲಿ ವೇದಗಳನ್ನು ಪ್ರಮಾಣವೆಂದು ಒಪ್ಪದ ಚಾರ್ವಾಕ, ಜೈನ, ಬೌದ್ಧ, ಮುಂತಾದ ಮತಗಳು ಪ್ರಬಲವಾಗಿದ್ದವು. ಬೌದ್ಧಮತ ಪ್ರಾಬಲ್ಯ ಪಡೆದ ಮೇಲೆ ವೈದಿಕ ಕರ್ಮಗಳೆಲ್ಲ ನಷ್ಟ ವಾಗುತ್ತ ಬಂದವು. ಆಗ ಶಬರ ಕುಮಾರ ಸ್ವಾಮಿ, ಕುಮಾರಿಲಭಟ್ಟ ಮೊದಲಾದವರು ಜೈಮಿನಿಸೂತ್ರಗಳಿಗೆ ಭಾಷ್ಯಗಳನ್ನು ಬರೆದು ವೈದಿಕ ಮತದ ಪುನರುತ್ಥಾನ ಮಾಡಿದರು.

ಕಾಲಾಂತರದಲ್ಲಿ ಶಂಕರಾಚಾರ್ಯರು ಕೇರಳದಲ್ಲಿ ಜನ್ಮತಾಳಿದರು. ಬಾಲ್ಯದ ಲ್ಲಿಯೇ ಸನ್ಯಾಸವನ್ನು ಸ್ವೀಕರಿಸಿ ಭಾರತದ ಲ್ಲೆಲ್ಲ ಸಂಚರಿಸಿ ನಾಸ್ತಿಕರಾದ ಬೌದ್ಧರನ್ನು ಕರ್ಮಠರಾದ ಬ್ರಾಹ್ಮಣರನ್ನು ವಾದವಿವಾ ದಗಳಲ್ಲಿ ಸೋಲಿಸಿ ಜ್ಞಾನಕ್ಕೆ ಪ್ರಾಧಾನ್ಯ ವನ್ನು ಕೊಟ್ಟರು. ಉಪನಿಷತ್ತು, ಬ್ರಹ್ಮ ಸೂತ್ರ ಮತ್ತು ಭಗವದ್ಗೀತೆಗಳಿಗೆ ಅದ್ವೈತ ಪರವಾದ ಅರ್ಥವನ್ನು ಶಂಕರಾಚಾರ್ಯರು ಸಾಧಿಸಿದರು. "ಬ್ರಹ್ಮ ಒಂದೇ ಸತ್ಯ. ನಮಗೆ ಕಾಣುವ ಗಿಡ, ಮರ, ಪಕ್ಷಿ ಮೊದ ಲಾದ ಪ್ರಪಂಚವೆಲ್ಲ ಮಿಥ್ಯ. ಅವು ಅಜ್ಞಾ ನದ ಪ್ರಭಾವದಿಂದ ಸತ್ಯವೆಂಬ ಭ್ರಾಂತಿಗೆ ಆಧಾರವಾಗಿರುವುವು. ಒಂದೇ ಆಗಿರುವ ಬ್ರಹ್ಮ ನಾನಾರೂಪಗಳನ್ನು ತಾಳಿರುವಂತೆ ಕಾಣಬರುವುದು. ಬುದ್ಧಿ ತಿಳಿಯದವನಿಗೆ ವಿಚಾರ ವಿಮರ್ಶೆಗಳಿಂದ, ಶಾಸ್ತ್ರ ಜ್ಞಾನದ ವಿವೇಕ ಹುಟ್ಟಿ ಅವಿದ್ಯೆ ದೂರಸರಿದು ವಾಸ್ತವವಾಗಿ ತಾನು ಬ್ರಹ್ಮ ಎಂಬ ಜ್ಞಾನ ಹುಟ್ಟುವುದು" ಇದು ಅದ್ವೈತ ಸಿದ್ಧಾಂತ.

ರಾಮಾನುಜಾಚಾರ್ಯರು ಶಂಕರಾಚಾ ರ್ಯರ ಅದ್ವೈತವಾದವನ್ನು ನಿರಾಕರಿಸಿ "ಜಡಜೀವಿಗಳಿಗೆ ಸತ್ಯವಾದ ಪರಸ್ಪರ ಭೇದವಿರುವದು. ಎಲ್ಲ ಜೀವರಿಗಿಂತ ವಿಷ್ಣು ಸರ್ವೋತ್ತಮ. ಆತನಲ್ಲಿ ಅನನ್ಯಭಾವದಿಂದ ಭಕ್ತಿಯನ್ನು ಮಾಡಿದಲ್ಲಿ ಸಂಸಾರದ ಬಂಧನ ಗಳನ್ನು ಕಳಚಿಕೊಂಡು ಶ್ರೀಹರಿಯ ಸಾನ್ನಿ ಧ್ಯವನ್ನು ಸಮೀಪಿಸಿ ಅವನ ಅಂಶದಲ್ಲಿ ಲೀನ ವಾಗಿ ಬಿಡಬಹುದು." ಎಂದು ವಿಶಿಷ್ಟಾದ್ವೈತ ಸಿದ್ಧಾಂತವನ್ನು ಮಂಡಿಸಿದರು.

ಹದಿಮೂರನೆ ಶತಮಾನವು ಭಾರತದ ಚರಿತ್ರೆಯಲ್ಲಿ ಅನೇಕ ಏರಿಳಿತಗಳ ಪರ್ವ ಕಾಲ. ಶಾಸ್ತ್ರ ನಿಷ್ಣಾತರಾದ ವಿದ್ವಾಂಸ ರಲ್ಲಿ ಕೂಡ ಮಾಯಾವಾದದ ಬಗ್ಗೆ ಸಂದೇ ಹವಿದ್ದಿತು. ಕಣ್ಣಿಗೆಕಾಣುತ್ತಿರುವ ಪ್ರಪಂಚ ಸುಳ್ಳೆ? ಇದು ಭ್ರಾಂತಿಯೇ? ಮಾಯೆಯೆ? ಮಾನವನೇ ದೇವರೆನ್ನಬಹುದೇ? ಎಂಬ ಅನೇಕ ವಾದಗಳು ತಲೆದೋರಿದವು. ವೈದಿಕ ಧರ್ಮಕ್ಕೆ ಕತ್ತಲು ಕವಿದು, ಸಂಶಯದ ಮಬ್ಬಿನಲ್ಲಿ ತೊಳಲುತ್ತಿದ್ದ ಜನಕ್ಕೆ ಮಧ್ವಾ ಚಾರ್ಯರು ಬೆಳಕು ತೋರಿಸಿದರು.

ಮಧ್ವಾಚಾರ್ಯರು ವಾಯುದೇವರ ಮೂರನೆಯ ಅವತಾರ ಎಂಬುದು ವೈಷ್ಣವ ರೆಲ್ಲರ ನಂಬಿಕೆ. ಮೊದಲನೆಯ ಅವತಾರ 'ಹನುಮಂತ' ಎರಡನೆಯ ಅವತಾರ 'ಭೀಮಸೇನ', ಮೂರನೆಯದು 'ಶ್ರೀ ಮದಾನಂದತೀರ್ಥ ಭಗವತ್ಪಾದಾಚಾರ್ಯ' ಎಂದು. ಶ್ರೀಬಳಿತ್ಥಾಸೂಕ್ತ, ಮನ್ಯುಸೂಕ್ತ, ಛಾಂದೋಗ್ಯ ಉಪನಿಷತ್ತುಗಳು ಇದಕ್ಕೆ ಪ್ರಮಾಣಗಳಾಗಿವೆ.

ಘೋರ ಕಲಿಯುಗ ಪ್ರಾಪ್ತವಾಯಿತು. ಅನೇಕ ದುರ್ಮತಗಳಿಂದ ತತ್ತ್ವಮಾರ್ಗವು ಕಗ್ಗತ್ತಲೆಯಿಂದ ತುಂಬಿ ಕಾಣದಾಯಿತು. ಸಜ್ಜನರು ಅದನ್ನು ಹುಡುಕಿದರೂ ಸಿಗ ದಂಥ ಸಮಯ ಬಂದಿತು. ಆಗ ದೇವತೆ ಗಳು ಭಗವಂತನನ್ನು ಅವತರಿಸಲು



ಪ್ರಾರ್ಥಿಸಿದರು. ಆದರೆ ಪರಮಾತ್ಮನು ಕೃತ, ತ್ರೇತಾ, ದ್ವಾಪರಯುಗಗಳಲ್ಲಿ ಮಾತ್ರ ಅವತರಿಸುವನಾದ್ದರಿಂದ ಕಲಿಯುಗ ದಲ್ಲಿ ಅವತರಿಸಲು ಇಚ್ಛಿಸಲಿಲ್ಲ. ಬ್ರಹ್ಮ ದೇವರಿಗೆ ಅವತಾರವೇ ಇಲ್ಲವಾದ್ದರಿಂದ ಬೇರೆ ಯಾರೂ ತತ್ತ್ವಜ್ಞಾನ ಪ್ರತಿಷ್ಠೆ ಮಾಡುವ ಮಹಾಕಾರ್ಯದಲ್ಲಿ ಸಮರ್ಥರಲ್ಲವೆಂದು ಶ್ರೀಹರಿಯು ಭಾವ ಜೀವನರೆಂದು ಖ್ಯಾತ ರಾದ ಶ್ರೀವಾಯುದೇವರಿಗೆ ಅವತರಿಸಲು ಆಜ್ಞೆಮಾಡಿದನು. ವಾಯುದೇವರನ್ನು ಇತರ ದೇವತೆಗಳೂ ಪ್ರಾರ್ಥಿಸಿದರು. ಭಗ ವಂತನ ಆಜ್ಞೆಯನ್ನು ಶಿರಸಾವಹಿಸಿ ಸುರರ ಬಿನ್ನಹವಾಲೆಯನ್ನು ಕೊರಳಲ್ಲಿ ಧರಿಸಿ ವಾಯುದೇವರು ಭರತ ಭೂಮಿಯಲ್ಲಿ ಕ್ರಿ.ಶ. 1238ರಲ್ಲಿ ಮಧ್ಯಗೇಹರಿಂದ ವೇದ ವತಿ ಉದರದಿಂದ ಪಾಜಕ ಎಂಬ ಕ್ಷೇತ್ರ ದಲ್ಲಿ ಅವತರಿಸಿದರು.

ಮಧ್ಯಗೇಹಭಟ್ಟರು ವಿದ್ವಾಂಸರೂ ಧರ್ಮಶ್ರದ್ಧೆ, ದೈವಭಕ್ತಿ ಉಳ್ಳವರೂ ಆಗಿದ್ದರು. 12 ವರ್ಷಗಳವರೆಗೂ ಮಕ್ಕ ಳಾಗಲಿಲ್ಲ. ಅನಂತೇಶ್ವರನಿಗೆ ಹರಕೆ ಫಲ

**ಶ್ರೀಮತಿ ಮಾಯಾ ಕಡಕೋಳ**

ವಾಗಿ ಅವರ ಬಯಕೆ ಫಲಿಸಿ ಗಂಡುಮಗು ಆಯಿತು. ಮಗುವಿಗೆ 'ವಾಸುದೇವ' ಎಂದು ನಾಮಕರಣ ಮಾಡಿದರು. ಮಗುವು ಅಪೂರ್ವ ಲಕ್ಷಣಗಳಿಂದ ಕೂಡಿದ್ದು ಬೆಳೆಯುತ್ತಿದ್ದ ಹಾಗೆ ಶಕ್ತಿ ಸಾಮರ್ಥ್ಯಗಳು, ಆಟಪಾಟಗಳು, ವಯಸ್ಸಿಗೆ ಮೀರಿದವರ್ತನೆ ವೃದ್ಧಿಯಾದವು. ಚಿಕ್ಕ ವಯಸ್ಸಿನಲ್ಲಿಯೇ, ಶ್ರುತಿ, ಸ್ಮೃತಿ ಅವಿರುದ್ಧವಾದ ಅಲೌಕಿಕ ಪ್ರತಿಭೆಯಿಂದ ವಿರಾಜಿಸಿದರು. ಅಸಾಧಾರಣ ಚರಿತ್ರೆಗಳನ್ನು ತೋರಿಸಿದರು. ಅಚ್ಯುತ ಪ್ರೇಕ್ಷರೆಂಬ ಸನ್ಯಾಸಿಗಳು ದೊಡ್ಡ ಯತಿಪೀಠಿಗೆ ಸೇರಿದವರು. ಅವರು ಯೋಗ್ಯನಾದ ಶಿಷ್ಯನಿಗಾಗಿ ನಿರೀಕ್ಷಿಸುತ್ತಿದ್ದ ಸಮಯಕ್ಕೆ ಸರಿಯಾಗಿ ವಾಸುದೇವನ ಗುರುಕುಲವಾಸ ಮುಗಿದಿತ್ತು. ವಾಸುದೇವನ ಮನಸ್ಸು ಸಾಂಸಾರಿಕ ಜೀವನಕ್ಕೆ ವಿಮುಖವಾಗಿತ್ತು. ಅಚ್ಯುತಪ್ರೇಕ್ಷರಿಂದ ಸನ್ಯಾಸ ಸ್ವೀಕರಿಸಿ 'ಶ್ರೀಮದಾನಂದ ತೀರ್ಥ'ರೆಂಬ ಅನ್ವರ್ಥಕ ನಾಮದಿಂದ ವಿಶ್ವವಿಖ್ಯಾತರಾದರು. ವಯಸ್ಸಿಗೆ ಮೀರಿದ ಬುದ್ಧಿ ಶಕ್ತಿ, ಪಾಂಡಿತ್ಯ, ವಾದವೈಖರಿ ಲಕ್ಷಣಗಳಿಂದ ಹೊಂದಿದ್ದ ಶಿಷ್ಯನ ಪ್ರತಿಭೆ ಅದ್ಭುತವಾಗಿತ್ತು. ಶಿಷ್ಯನ ಸಂದೇಹ ನಿವಾರಿಸಲು ಗುರುಗಳಿಗೆ ಕಷ್ಟವಾಯಿತು. ವಾಸುದೇವನಿಗೆ ಪೂರ್ಣಪ್ರಜ್ಞ, ಅನುಮಾನ ತೀರ್ಥ, ಆನಂದತೀರ್ಥ, ಮಧ್ವಾಚಾರ್ಯ, ಇತ್ಯಾದಿ ಹೆಸರುಗಳಿಂದ ಕರೆಯುವುದು ರೂಢಿಯಲ್ಲಿ ಬಂದಿತು. ಗುರುಗಳು ಅದ್ವೈತ ಸಿದ್ಧಾಂತವನ್ನು ಅನುಮೋದಿಸಿದ್ದರು. ಆ ತತ್ತ್ವಕ್ಕೆ ಅನುಗುಣವಾದ ಗ್ರಂಥಗಳನ್ನು ಶಿಷ್ಯನಿಗೆ ಬೋಧಿಸತೊಡಗಿದಾಗ ಪೂರ್ಣಪ್ರಜ್ಞರು ನಾನಾಬಗೆಯ ಆಕ್ಷೇಪಣೆಗಳನ್ನು ಒಡ್ಡಿ ಗುರುಗಳನ್ನು ನಿರುತ್ತರರನ್ನಾಗಿಮಾಡಿ ಪಾಠ ಮುಂದುವರಿಯಲು ಅವಕಾಶಕೊಡುತ್ತಿರಲಿಲ್ಲ. ಪುಂಖಾನುಪುಂಖವಾಗಿ ಎದುರಾಗುತ್ತಿದ್ದ ಪ್ರಶ್ನೆಗಳಿಗೆ ಸಮಂಜಸವಾಗಿ ಉತ್ತರಕೊಡಲಾಗದೆ. "ಸೂತ್ರಗಳ ಸಮಂಜಸ ಅರ್ಥ ನಿನಗೆ ಗೊತ್ತಿದ್ದರೆ ನೀನೇ ಒಂದು ಭಾಷ್ಯವನ್ನು ಬರೆ" ಎಂದು ಗುರುಗಳು ನುಡಿದಾಗ ಪೂರ್ಣಪ್ರಜ್ಞರು "ಆಗಬಹುದು" ಎಂದು ಮಾತ್ರ ಹೇಳಿದರು.

ತಮ್ಮ ಅಭಿಪ್ರಾಯಗಳನ್ನು ವಿದ್ವಾಂಸರ ಮುಂದೆ ಇಟ್ಟು ಅವರ ಪ್ರತಿಕ್ರಿಯೆಗಳನ್ನು ಗಮನಿಸುವುದಕ್ಕಾಗಿ ಪೂರ್ಣಪ್ರಜ್ಞರು ದಕ್ಷಿಣ ದೇಶದ ಅನಂತಶಯನ, ರಾಮೇಶ್ವರ, ಶ್ರೀರಂಗ ಮುಂತಾದ ಕ್ಷೇತ್ರಗಳಲ್ಲಿ ಸಂಚಾರ ಮಾಡಿದರು. ಯಾವ ಪಂಡಿತರೂ ಆಚಾರ್ಯರೊಡನೆ ವಾದದಲ್ಲಿ ಜಯಗಳಿಸಲಿಲ್ಲ.

ಮುಂದೆ ಮಧ್ವಾಚಾರ್ಯರು ಉತ್ತರ ದಿಕ್ಕಿನಲ್ಲಿ ಪ್ರಯಾಣಮಾಡಿ ಬದರಿಗೆ ಹೋದರು. ಅಲ್ಲಿ ವೇದವ್ಯಾಸರ ಸಾಕ್ಷಾತ್ಕಾರ ಪಡೆದು ತಮ್ಮ ಭಾಷ್ಯ ರಚನೆಗೆ ಪ್ರಚೋದನೆ ಪಡೆದರು. ಹಲವಾರು ಪಂಡಿತರನ್ನು ವಾದದಲ್ಲಿ ಜಯಿಸಿ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡು ಹಿಂದಿರುಗಿದರು. ತಾವು ರಚಿಸಿದ ಬ್ರಹ್ಮ ಸೂತ್ರ ಭಾಷ್ಯವನ್ನು ಶಿಷ್ಯರಿಗೆ ವಿವರಿಸಿ ತಿಳಿಸಿದರು.

ಮಧ್ವಾಚಾರ್ಯರು ಮೂವತ್ತೇಳು ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಿಗೆಲ್ಲ ಒಟ್ಟಾಗಿ ಸರ್ವಮೂಲ ಎಂದು ಹೇಳುತ್ತಾರೆ. ಮಧ್ವಾಚಾರ್ಯರು ತಮ್ಮ ಭಾಷ್ಯದಲ್ಲಿ ವೇದ, ಇತಿಹಾಸ, ಪುರಾಣಗಳ ಅನೇಕ ವಾಕ್ಯಗಳನ್ನು ಪ್ರಮಾಣವಾಗಿ ಉದಾಹರಿಸಿದ್ದಾರೆ. ಅವರ ಮಾತುಗಳು ಸಂಕ್ಷಿಪ್ತವೂ, ಗಹನವೂ, ಅರ್ಥಗರ್ಭಿತವೂ ಆಗಿವೆ. ಇವರ ಗ್ರಂಥಗಳಲ್ಲಿ ಅಪಾರ ಬುದ್ಧಿ ಶಕ್ತಿ, ಆಳವಾದ ತತ್ತ್ವಜ್ಞಾನ ಹರಿತವಾದ ತರ್ಕವಾದ, ಅರ್ಥಸಂಪನ್ನಯುಕ್ತವಾದ ಗಂಭೀರಶೈಲಿ, ಭಾಷೆಯಲ್ಲಿ ಬಿಗಿ, ಗಾಂಭೀರ್ಯ ಹಾಗೂ ಪರಿಪೂರ್ಣತೆಯನ್ನು ಕಾಣಬಹುದು.

ದ್ವೈತಸಿದ್ಧಾಂತದ ಪ್ರಕಾರ ಹರಿಯೇ ಸರ್ವೋತ್ತಮನು. ಪ್ರಪಂಚ ಸತ್ಯ. ಹರಿಯ ಅನುಚರರಲ್ಲಿ ಮೇಲು ಕೀಳುಂಟು. ಲೋಕದಲ್ಲಿ ಅಸಂಖ್ಯಾತ ವ್ಯತ್ಯಾಸಗಳಿವೆ. ಜೀವೇಶ್ವರ ಭೇದ, ಜಡೇಶ್ವರ ಭೇದ, ಜೀವ ಜೀವ ಭೇದ, ಜೀವ ಜಡ ಭೇದ ಮತ್ತು ಜಡ ಜಡ ಭೇದ. ತಾರತಮ್ಯವೇ ಈ ದರ್ಶನದ ಮೂಲ. ಆದುದರಿಂದಲೇ ದ್ವೈತವೆನಿಸಿದೆ. ಶ್ರೀಹರಿಯು ಸರ್ವಶಕ್ತ ಸರ್ವಜ್ಞ. ಜೀವ ಜಡ ವಿಶಿಷ್ಟಕ್ಕೆ ಅವನೇ ಸರ್ವೇಶ್ವರ. ಸೃಷ್ಟಿ, ಸ್ಥಿತಿ, ಲಯ ನಿಯಮನ, ಜ್ಞಾನ, ಅಜ್ಞಾನ, ಬಂಧ ಮುಕ್ತಿ ಇತ್ಯಾದಿ ವ್ಯಾಪಾರವುಳ್ಳವನು. ಅವನೇ ಜಗತ್ಕರ್ತೃ, ಎಲ್ಲರಲ್ಲಿಯೂ ಅಂತರ್ಯಾಮಿಯಾಗಿದ್ದು ಕೆಲಸ ಮಾಡಿಸುವವನು. ಪರಮಾತ್ಮನೇ ಬಾಧ್ಯ, ಬಾಧಿತ, ಗ್ರಾಹ್ಯ, ಗ್ರಾಹಕ, ನಿಯಾಮ್ಯ ನಿಯಾಮಕ.

ಮಧ್ವಾಚಾರ್ಯರ ಮತ್ತು ರಾಮಾನುಜಾಚಾರ್ಯರ ಮತಾಭಿಪ್ರಾಯಗಳು ಕೆಲವು ಸಮಾನವಾಗಿವೆ. ಹರಿ ಸರ್ವೋತ್ತಮನು. ಜೀವಿಗಳು ಪರಮಾತ್ಮನಿಂದ ಭಿನ್ನರು. ಜೀವಿಗಳು ಉತ್ಪತ್ತಿಯಾದ ವಸ್ತುಗಳಲ್ಲಿ ವೈಕುಂಠಪ್ರಾಪ್ತಿಯಾದ ಮುಕ್ತಿ. ಮುಕ್ತಿ ಸಾಧನೆಗೆ ಭಕ್ತಿಯೇ ಮಾರ್ಗ. ಈ ಜಗತ್ತು ಸತ್ಯ. ಬ್ರಹ್ಮನು ನಿರ್ಗುಣನಲ್ಲ. ಅನಂತ ಕಲ್ಯಾಣಗುಣ ಪರಿಪೂರ್ಣನು.

ದ್ವೈತ ಸಿದ್ಧಾಂತದ ಪ್ರಕಾರ ಶ್ರೀಹರಿಯು ಈಶನಾದರೆ ಜೀವರು ದಾಸರು. ಇವರು ಅವನ ಪ್ರತಿಬಿಂಬ. ಇದೇ ಬಿಂಬ ಪ್ರತಿಬಿಂಬತ್ವ. ಜೀವರು ಅನಾದಿ ನಿತ್ಯರು. ಮತ್ತು ತರತಮ ಭಾವವುಳ್ಳವರು. ಇವರಲ್ಲಿ ಸ್ತ್ರೀ ಪುಂಭೇದವುಂಟು. ಸಾತ್ವಿಕ, ರಾಜಸ, ತಾಮಸ ಭೇದವುಂಟು. ಇವರಿಗೆ ಪ್ರಕೃತಿ ಸಂಬಂಧ ಸುಖ ದುಃಖ ಇವೆ. ಮುಕ್ತಿಯೋಗ್ಯರಾದ ಜೀವರಲ್ಲಿ ದೇವ, ಋಷಿ, ಪಿತೃ, ಚಕ್ರವರ್ತಿ, ಮಾನವೋತ್ತಮ ಎಂಬ ಭೇದಗಳಿವೆ. ಕರ್ಮಕ್ಷಯವಾದ ಮೇಲೆ ಪ್ರಕೃತಿಕಟ್ಟಿನಿಂದ ಬಿಡುಗಡೆ ಹೊಂದಿ ಪರಮಾತ್ಮ ಸನ್ನಿಧಿಯಲ್ಲಿ ಸ್ವಸ್ವರೂಪ ಸುಖಾನುಭವ ಹೊಂದುವುದೇ ಮೋಕ್ಷ. ಇಂತಹ ಮುಕ್ತಿಯಲ್ಲಿಯೂ ಭೇದವುಂಟು. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂಬ ತಾರತಮ್ಯವಿದೆ.

ಸಾಲೋಕ್ಯವೆಂದರೆ ವೈಕುಂಠ ಲೋಕದಲ್ಲಿ ಎಲ್ಲಿಯಾದರೂ ಇದ್ದು ತಮ್ಮ ಇಷ್ಟಾನುಸಾರ ಭೋಗಗಳನ್ನು ಅನುಭವಿಸುವುದು. ಸಾಮೀಪ್ಯವೆಂದರೆ ಭಗವಂತನ ಸಮೀಪದಲ್ಲಿದ್ದು ಯಥೇಷ್ಟವಾದ ಭೋಗಗಳನ್ನನು

(28 ನೇ ಪುಟ ನೋಡಿ)

"ಅನಿಲದೇವರ ಒಲುಮೆ ಸರ್ವರಿಗೂ ಅತ್ಯವಶ್ಯ". ಇದಕ್ಕೆ ಕಾರಣವನ್ನು ಶ್ರೀ ಜಗನ್ನಾಥ ದಾಸರು 'ಶ್ರೀ ಹರಿಕಥಾಮೃತಸಾರ' ದಲ್ಲಿ ಹೀಗೆ ವಿವರಿಸಿದ್ದಾರೆ.

ಒಂದು ದಿನದೊಳಗನಿಲ ಇಪ್ಪ ।
ತ್ತೊಂದು ಸಾವಿರದಾರುನೂರು ಮು।
ಕುಂದನಾಜ್ಞೆಯಲಿ ಮಾಡಿ ಮಾಡಿಸಿ ಲೋಕ
ಗಳ ಪೊರೆವ।

ಎಂಬಂತೆ ಅನಿಲದೇವರು ಹದಿನಾಲ್ಕು ಲೋಕದ ಜೀವರಲ್ಲಿ ಆಪ್ತನಂತೆ ಇದ್ದುಕೊಂಡು ಒಂದು ದಿನ ದಲ್ಲಿ 21,600 ಶ್ವಾಸಜಪಗಳನ್ನು ಮುಕುಂದನ ಆಜ್ಞೆಯ ಪ್ರಕಾರ ಮಾಡಿ ಮಾಡಿಸಿ ರಕ್ಷಿಸುವನು. ಮತ್ತು

ದೇಹೇಽಪಿಯತ್ರ ಪವನೋಽತ್ರ
ಹರಿರ್ಯತೋಽಸೌ।
ತತ್ರೈವ ವಾಯುರಿತಿ ವೇದ ವಚಪ್ರಸಿದ್ಧಂ ॥

ಎಂಬ ಪ್ರಮಾಣದಂತೆ ವಾಯುದೇವರು ಜೀವರ ಸ್ಥೂಲಶರೀರಗಳಲ್ಲಿರುವವರೆಗೆ ಶ್ರೀಹರಿಯೂ ಅಲ್ಲಿ ವಾಸವಾಗಿರುತ್ತಾನೆ. ವಾಯುದೇವರು ವೇದ ಪ್ರತಿಪಾದ್ಯನೇ ಎಂಬುದನ್ನು ಶ್ರೀವಾದಿರಾಜ ಪೂಜ್ಯಚರಣರು "ಈತನೇ ಲೋಕಗುರು ವೇದ ವಿಖ್ಯಾತಾ" ಎಂಬ ಪದ್ಯದಲ್ಲಿ ಚೆನ್ನಾಗಿ ವಿವರಿಸಿದ್ದಾರೆ. ಈತ ಆ ಪರಮಾತ್ಮನ ಆಜ್ಞೆಯನ್ನು ಶಿರಸಾವಹಿಸಿ ತ್ರೇತಾಯುಗದಲ್ಲಿ ಹನುಮಂತ ದೇವನಾಗಿ, ದ್ವಾಪರದಲ್ಲಿ ಭೀಮಸೇನನಾಗಿ ಮತ್ತು ಕಲಿಯುಗದಲ್ಲಿ ಮಧ್ವಾಚಾರ್ಯರೆಂಬ ಹೆಸರಿನಿಂದ ಅವತಾರ ಮಾಡಿದನು. ಕೊನೆಯ ಅವತಾರದಲ್ಲಿ ದುಃಶಾಸ್ತ್ರಗಳನ್ನು ಖಂಡಿಸಿ ವೇದ, ಉಪನಿಷತ್ತು, ಬ್ರಹ್ಮಸೂತ್ರ, ಗೀತಾ ಮೊದಲಾದವುಗಳಿಗೆಲ್ಲ ಸರಿಯಾದ ಅರ್ಥವನ್ನು ಉಪದೇಶ ಮಾಡಿದರು. ಈ ಅವತಾರತ್ರಯ ಮಹಿಮೆಯು ಬಳಿತ್ಥಾ ಸೂಕ್ತದಲ್ಲಿ ಉಕ್ತವಾಗಿದೆ. ನಮ್ಮ ಕನ್ನಡದ ಹರಿದಾಸರು ಕೂಡ ಈ ಅವತಾರ ತ್ರಯ ಮಹಿಮೆಯನ್ನು ತಮ್ಮದೇ ಆದ ವಿಶೇಷವಾದ ಶೈಲಿಯಲ್ಲಿ ಹೊಗಳಿ ಹಾಡಿದ್ದಾರೆ. ಅವರವರ ವಾಣಿಯಿಂದಲೇ ಇಲ್ಲಿ ಅವತಾರತ್ರಯ ಮಹಿಮೆಯನ್ನು ಕಾಣಬಹುದಾಗಿದೆ.

ಶ್ರೀಪಾದರಾಯರು ವಾಯುದೇವರ ಮೂಲ ರೂಪ ವರ್ಣನೆಯನ್ನು "ಮಧ್ವನಾಮ"ಎಂಬ ಮೇರುಕೃತಿಯಲ್ಲಿ–

ಜಯ ಜಯ ಜಗತ್ರಾಣ ಜಗದೊಳಗೆ
ಸುತ್ರಾಣ।

**ಶ್ರೀನಿವಾಸ ಮಠದ** ಬಿ.ಎಸ್‌ಸಿ;

ಅಖಿಲ ಗುಣಸದ್ಧಾಮ ಶ್ರೀ ಮಧ್ವ
ನಾಮಾ ॥

ಆವಕಚ್ಛಪರೂಪದಿಂದಲಂಡೋದಕದಿ ಓವಿ ಧರಿಸಿಹ ಶೇಷಮೂರುತಿಯನು ಆವಾವನ ಬಳಿ ಪಿಡಿದು ಹರಿಯಸುರರೈದುವರೋ ಆ ವಾಯು ನಮ್ಮ – ಕುಲಗುರು ರಾಯರು – ಎಂಬುದಾಗಿ ತಿಳಿಸಿ–

ಮೊದಲವತಾರವಾದ ಹನುಮದವತಾರವನ್ನು ವರ್ಣಿಸುತ್ತಾ–

ತ್ರೇತೆಯಲಿ ರಘುಪತಿಯ ಸೇವೆ ಮಾಡುವೆ
ನೆಂದು
ವಾತಸುತ ಹನುಮಂತನೆಂದೆನಿಸಿದ |
ಪೋತಭಾವದಿ ತರಣಿ ಬಿಂಬಕ್ಕೆ ಲಂಘಿಸಿದ
ಈತಗೆಣೆಯಾರು ಮೂರ್ಲೋಕದೊಳಗೆ
–ಎನ್ನುತ್ತಾರೆ.

ದ್ವಿತೀಯ ಅವತಾರವನ್ನು–

ಪಂಕಜಾಕ್ಷ ಹಯವದನ ಕಟಾಕ್ಷದಿ।
ಲಂಕೆಯ ಸುಟ್ಟೆ ಸೈ ಸಂಜೀವ ॥
–ಎನ್ನುತ್ತಾರೆ.

ಈ ನಮ್ಮ 'ಸಂಜೀವರಾಯರ' ಸ್ಮರಣೆ ಮಾಡಿದರೆ 'ಅಂಜಿಕೆಯೇ ಇಲ್ಲ' ಎಂದು ಪುರಂದರ ದಾಸರು ಹೀಗೆ ಅಭಯ ಕೊಡುತ್ತಾರೆ–

ಅಂಜಿಕಿನ್ಯಾತಕಯ್ಯ । ಸಜ್ಜನರಿಗೆ । ಭಯವು
ಇನ್ಯಾತಕಯ್ಯ ।
ಸಂಜೀವರಾಯರ ಸ್ಮರಣೆಮಾಡಿದ ಮೇಲೆ।
ಕನಸಿನಲಿ ಮನಸಿನಲಿ ಕಳವಳವಾಗಿರೆ ।
ಹನುಮನ ನೆನೆದರೆ ಹಾರಿಹೋಗದೆ ಪಾಪ ।
ರೋಮ ರೋಮಕೆ ಕೋಟಿ ಅಂಶವುದುರಿಸಿದ।
ಭೀಮಸೇನನ ನೆನೆದರೆ ಬಿಟ್ಟುಹೋಗದೆ ಪಾಪ।
ಪುರಂದರವಿಠಲನ ಪೂಜೆಯ ಮಾಡುವ ।
ಗುರುಮಧ್ವರಾಯರ ಸ್ಮರಣೆ ಮಾಡಿದ
ಮೇಲೆ ।
ಅಂಜಿಕಿನ್ಯಾತಕಯ್ಯ –ಎನ್ನುತ್ತಾರೆ.




ಆ ಮಾರುತನೆ ಭೀಮನೆನಿಸಿ ದ್ವಾಪರದಲ್ಲಿ
ಸೋಮಕುಲದೊಳು ಜನಿಸಿ ಪಾರ್ಥನೊಡನೆ ।
ಭೀಮವಿಕ್ರಮ ರಕ್ಕಸರ ಮುರಿದೊಟ್ಟಿದ
ಆ ಮಹಿಮ ನಮ್ಮ ಕುಲಗುರುರಾಯರು ॥
– ಎಂಬುದಾಗಿ ವರ್ಣಿಸಿ

ಮಧ್ವಾವತಾರವನ್ನು–
ದಾನವರು ಕಲಿಯುಗದೊಳವತರಿಸಿ ಸುಜನರಿಗೆ
.......... ಬೋಧಿಪುದನರಿತು ।
ಜ್ಞಾನಿ ತಾ ಪವಮಾನ ಭೂತಳದೊಳವತರಿಸಿ
ಮಾನನಿಧಿ ಮಧ್ವಾಖ್ಯನೆಂದೆನಿಸಿದ ।
ಎಂಬ ಪದ್ಯದಿಂದ ವರ್ಣಿಸಿದ್ದಾರೆ.

ಇನ್ನು ವಾದಿರಾಜ ಪೂಜ್ಯಚರಣರು ಹನುಮಂತದೇವರ ಸಾಹಸವನ್ನು ಹೊಗಳುವುದು ಬಹು ಅಂದವಾಗಿ ಮೂಡಿ ಬಂದಿದೆ–

ಎಷ್ಟು ಸಾಹಸವಂತ ನೀನೇ ಬಲವಂತ ।
ಥಿಟ್ಟ ಮೂರುತಿ ಭಳಿ ಭಳಿರೆ ಹನುಮಂತ ।
ಅಟ್ಟಹಾಸದಿಂದ ಸುರರ ತಲೆಗಳ ಕುಟ್ಟಿ
ಚಂಡಾಡಿದೆ ಘಟ್ಟರೆವಂತ ।

ಎಂದು ಹೇಳುತ್ತ 'ಲ ಂ ಕಾ ದ ಹ ನ'ವನ್ನು ವಿವರಿಸುತ್ತಾ ಕೊನೆಗೆ;

ಶಂಖದೈತ್ಯನ ಕೊಂದೆ ಶರಣುಶರಣ್ಯನ್ಯು ।
ಶಂಖಗಿರಿಯಲಿ ನಿಂದೆ ಹನುಮಂತರಾಯ ।

ಮುಂದೆ ಭೀಮಸೇನ ದೇವರನ್ನು
ದ್ವಾಪರಾಂತ್ಯದಲಿ ಶ್ರೀ ಕೃಷ್ಣನಂಘ್ರಿಯ
ಭಜಿಸಿ
ಪಾಪಿಮಾಗಧ ಬಕರ ಕೀಚಕಾದಿಗಳ
ಕೋಪದಿಂದಲಿ ತರಿದು ಕುರುಕುಲವ ಸವರಿ ಪ್ರ-
ತಾಪದಿಂದಲಿ ಮೆರೆದೆ ಖಳರ ನೀ ಮುರಿದೆ

ಎಂದು ಬಣ್ಣಿಸಿ ಮಧ್ವಾಚಾರ್ಯರನ್ನು ಕೆಳಗಿನಂತೆ ಕೊಂಡಾಡುತ್ತಾರೆ–

ಮಾಯಿಗಳು ಹೆಚ್ಚಿ ಮತವೆಲ್ಲ ಸಂಕರವಾಗೆ
ತಾಯಿಲ್ಲದ ಕರುಗಳಂತೆ ಸುಜನರಿರಲು
ನೀಯವತರಿಸಿ ಮತವೆಲ್ಲ ಉದ್ಧರಿಸಿ ನಾ-
ರಾಯಣನೆ ಮೂಜಗಕೆ ಪರದೈವವೆಂದೊರೆದೆ-
ನಿನ್ನ ಮತವೇ ವೇದಶಾಸ್ತ್ರಗಳ ಸಮ್ಮತವು ।
ನಿನ್ನ ಮತವೇ ಇಹ ಪರಂಗಳಿಗೆ ಸಾಧನವು-

ಮತ್ತು ಈ ಕಾರಣದಿಂದಾಗಿಯೇ 'ಮಧ್ವ ಮತವು' ಶ್ರೇಷ್ಠವಾದದ್ದು ಎಂದಾಗಿ ಸಾರಿ–

ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ।
ಬಿಟ್ಟುಕೆಡಬೇಡಿ।
ಹಂಸಮೋತ್ತಮನಹುದೆಂಬೋ ಜ್ಞಾನವ
ತಾರತಮ್ಯದಿಂದ–
ತಿಳಿಸೋ ಮಾರ್ಗವ ಬಿಡಬೇಡಿ

ಎಂಬುದಾಗಿ ಪುರಂದರದಾಸರು ಸಜ್ಜನರಿಗೆ ಎಚ್ಚರಿಕೆ ಕೊಡುತ್ತಾರೆ.

ಇನ್ನೊಂದುಕಡೆ 'ಶ್ರೀ ಮುಖ್ಯಪ್ರಾಣ'ನ ಅವತಾರವಾದ ಈ 'ಕೂಸ'ನ್ನು ಕಂಡಿದ್ದೀರಾ? ಎಂದು ಕೇಳುವ ಪುರಂದರದಾಸರ ನುಡಿ ಭಾವ ಪೂರ್ಣವಾಗಿದೆ.

ಕೂಸಿನ ಕಂಡೀರಾ? ಗುರು ಮುಖ್ಯಪ್ರಾಣನ
ಕಂಡೀರಾ।
ಬಾಲನ ಕಂಡೀರಾ। ಬಲವಂತನ ಕಂಡಿರಾ।

ಎಂದು ಕೇಳುತ್ತ ಅವತಾರತ್ರಯಗಳ ವರ್ಣನೆಯನ್ನು ಅಂದವಾಗಿ ಮಾಡಿದ್ದಾರೆ.

ಅಂಜನೆಯುದರದಿ ಪುಟ್ಟಿತು ಕೂಸು।
ರಾಮನ ಚರಣಕೆ ಎರಗಿತು ಕೂಸು।
ಸೀತೆಗೆ ಉಂಗುರ ಕೊಟ್ಟಿತು ಕೂಸು।
ಲಂಕಾಪುರವನೆ ಸುಟ್ಟಿತು ಕೂಸು।
ಬಂಡಿ ಅನ್ನವನುಂಡಿತು ಕೂಸು। ಬಕನ
ಪ್ರಾಣವ ತಿಂದಿತು ಕೂಸು।
ವಿಷದ ಲಡ್ಡುಗೆಮೆದ್ದಿತು ಕೂಸು। ಮಡದಿಗೆ
ಪುಷ್ಪವ ಕೊಟ್ಟಿತು ಕೂಸು।
ಮಾಯಾವಾದಿಗಳ ಗೆದ್ದಿತು ಕೂಸು। ದ್ವೈತ
ಮತವನುದ್ಧರಿಸಿತು ಕೂಸು।
ಮಧ್ವರಾಯನೆಂಬ ಪೆಸರಿನ ಕೂಸು।
ಪುರಂದರ ವಿಠಲನಪ್ರಿಯುವ ಕೂಸು॥

ಈ ಕೂಸು 'ಬಲವಂತೆ'ವಾದದ್ದು ಎಂಬುದನ್ನು ಇನ್ನೊಂದು ಪದ್ಯದಲ್ಲಿ ಸ್ವಾರಸ್ಯವಾಗಿ ಹಾಡಿದ್ದಾರೆ.

ಎಂಥ ಬಲವಂತನೋ ಕುಂತಿಯ
ಸಂಜಾತನೋ
ಭಾರತಿಗೆ ಕಾಂತನೋ ನಿತ್ಯ ಶ್ರೀಮಂತನೋ।
ರಾಮಚಂದ್ರನ ಬಾಣನೋ ಅಸುರ ಹೃದಯ
ಬಾಣನೋ
ಖಳರ ಗಂಟಲ ಗಾಣನೋ ಜಗದೊಳಗೆ
ಪ್ರವೀಣನೋ
......................
ಉಡುಪಿ ಕೃಷ್ಣನ ನಿಲಿಸಿದನೋ। ಪುರಂದರ
ವಿಠಲನ ಒಲಿಸಿದನೋ–

ವ್ಯಾಸರಾಯರು ಈ ಮುಖ್ಯಪ್ರಾಣ ದೇವನನ್ನು ಒಂದು ಪದ್ಯದಲ್ಲಿ ಹೊಗಳುತ್ತಾ–

ನೀನೇ ವರಗುರು ಮುಖ್ಯಪ್ರಾಣ ನಿರಂ।
ತರವು ನಂಬಿದೆನೋ ನಿಖಿಳ ಗುಣಪೂರ್ಣ॥

ಜ್ಞಾನಚಂದ್ರಿಕೆ ಪೊಳೆಯೆ ಭಕ್ತಿವಾರಿಧಿಯುಕ್ಕೆ।
ಮನ ಚಕೋರವು ವಿಷ್ಣು ಪದದಿ ನಲಿಯೇ
ದೀನಜನ ಭಯವಡಗೆ ತಾಪತ್ರಯಗಳೋಡೆ।
ಆನಂದತೀರ್ಥೆಂದು ಶ್ರೀಕೃಷ್ಣ ತಾಮೆಚ್ಚೆ।

– ಎಂದಾಗಿ ಬಹುಚೆನ್ನಾಗಿ ಹೇಳಿದ್ದಾರೆ.

ವಾಯುದೇವರ ಮೂರನೆ ಅವತಾರವಾದ ಆನಂದತೀರ್ಥರನ್ನು ಪ್ರಾಣೇಶ ವಿಠಲರು –

ಆನಂದ ತೀರ್ಥರೆಂಬೋ ಆರ್ತಿಯ ಪೆಸರುಳ್ಳ
ಗುರುಮಧ್ವಮುನಿರಾಯಾ।
ಏನೆಂಬೆ ನಾ ನಿಮ್ಮ ಚರಣಕ್ಕೆ ಎಣೆಗಾಣೆ
ಗುರುಮಧ್ವಮುನಿರಾಯಾ॥
......................
ಗುರುಪ್ರಾಣೇಶ ವಿಠಲ ಪರನೆಂದು ಡಂಗುರವ
ಗುರುಮಧ್ವಮುನಿರಾಯಾ।
ಸಾರಿ ಸಜ್ಜನರಿಗೆ ಹರಿಯಲೋಕ ತೋರಿಸಿದಿ
ಗುರುಮಧ್ವಮುನಿರಾಯಾ।

ಎನ್ನುತ್ತಾ ಬಹುವಾಗಿ ಕೊಂಡಾಡಿದ್ದಾರೆ.

ವಿಜಯದಾಸರು "ಈ ಮಧ್ವರಾಯರ ಕರುಣ ಪಡೆಯದವ ಧರೆಯೊಳಗೆ ಇದ್ದರೇನು? ಇಲ್ಲದಿದ್ದರೇನು" ಎಂದು ತಿಳಿಸುತ್ತಾ–

ಮಧ್ವರಾಯರ ದಾಸನಾದವನೆ ನಿರ್ದೋಷಿ
ಮಧ್ವರಾಯರ ಬಂಟ ಜಗಕೆ ನೆಂಟ।
ಮಧ್ವರಮಣ ನಮ್ಮ ವಿಜಯವಿಠಲನಾದ
ಮಧ್ವೇಶನಾ ಕರುಣ ಪಡೆದವನೆ ಶರಣ...
ಎನ್ನುತ್ತಾರೆ.

ಹನುಮ, ಭೀಮ, ಮಧ್ವರೇ ನಮ್ಮ ತಾಯಿ ತಂದೆ ಬಂಧುಬಳಗ ಎಂದು ಹೇಳುವ ಪ್ರಸನ್ನ ವೆಂಕಟದಾಸರ ನುಡಿ ಭಾವಪರವಶತೆಯಿಂದ ಕೂಡಿದೆ –

ಹನುಮಾ ನಮ್ಮ ತಾಯಿತಂದೆ।
ಭೀಮಾ ನಮ್ಮ ಬಂಧು ಬಳಗಾ।
ಆನಂದತೀರ್ಥರೇ ನಮ್ಮ ಗತಿಗೋತ್ರರು।

ಮುಖ್ಯಪ್ರಾಣದೇವರ ಹೊರತು ಕಾಯುವವರು ಬೇರೆ ಯಾರೂ ಇಲ್ಲ ಈ ಜಗದಲ್ಲಿ ಎನ್ನುತ್ತಾರೆ... ಶ್ರೀ ಜಗನ್ನಾಥದಾಸರು.

ಮುಖ್ಯಪ್ರಾಣದೇವ ನೀನಲ್ಲದೆ ಕಾಯ್ವರ
ಕಾಣೆ ಲೋಕದೊಳಗೆ।
ವಾಸವ ಕುಲಿಶದಿ ಘಾಸಿಸೊ ಜೀವರ। ಶ್ವಾಸ
ನಿರೋಧಿಸಿದೆ।
ಆ ಸಮಯದ ಕಮಲಾಸನ ಹೇಳಲು ನೀ
ಸಲಹಿದೆ ಜಗವ।
......................

ನಂತರ ಶ್ರೀ ಗೋಪಾಲದಾಸರು ಶ್ರೀಹರಿ ಶರಣರಲ್ಲಿ ಇವರೇ ಅಗ್ರೇಸರರು ಎನ್ನುತ್ತಾರೆ.

ಶರಣು ಹರಿಯ ಶರಣಾಗ್ರೇ
ಸರನೆ ಹನುಮ ಭೀಮ ಮಧ್ವ
ಗುರುವೆ ನಿಮ್ಮ ಚರಣಕಮಲಕೆರಗಿ ನಮಿಸುವೆ

ಪುರಂದರ ದಾಸರು "ವಿಠ್ಠಲ"ನನ್ನು ತೋರಿಸುವವರೆಗೆ ನಿನ್ನನ್ನು ಬಿಡಲಾರೆ ಎಂದು ನಿರ್ಧಾರದಿಂದ ಬೇಡಿಕೊಳ್ಳುತ್ತಾರೆ.

ಬಿಡುವೇನೇನಯ್ಯಾ ಹನುಮಾ ಬಿಡುವೇ-
ನೇನಯ್ಯ
ಬಿಡುವೇನೇನೋ ಹನುಮಾ ನಿನ್ನ ಅಡಿಗಡಿಗೆ
ಶಿರವ ಬಾಗಿ
ದೃಢಭಕುತಿ ಸುಜ್ಞಾನವನ್ನು ತಡಮಾಡದೇ
ನೀ ಕೊಡುವ ತನಕ.
......................
ಹಲ್ಲು ಮುಡಿಯ ಕಚ್ಚಿದರೇನು। ಗುಲ್ಲು
ಮಾಡಿದರಂಜುವನಲ್ಲ।
ಫುಲ್ಲನಾಭ ಶ್ರೀ ಪುರಂದರ ವಿಠಲನ। ಇಲ್ಲಿಗೆ
ತೆಗೆದು ತೋರುವತನಕ-
ಬಿಡುವೇನೇನಯ್ಯಾ ಹನುಮಾ ಬಿಡುವೇ-
ನೇನಯ್ಯಾ।

ವಾದಿರಾಜರು ವಾಯುದೇವರಿಗೆ 'ಲಾಲಿ' ಹೇಳುವಾಗಲೂ ಈ ಮೂರು ಅವತಾರಗಳ ವರ್ಣನೆಯನ್ನು ಮಾಡಿರುವುದು ಬಹು ಅಂದವಾಗಿದೆ.

ಲಾಲಿ ಹನುಮಾ ಭೀಮ ಮಧ್ವಮುನಿರಾಯಾ
ಲಾಲಿ ರಾಮಾ ಕೃಷ್ಣವ್ಯಾಸರ ಪ್ರಿಯ।
ಮೂಜಗದಲಿ ನೀ ಮೆರೆದ ಬ್ರಹ್ಮಚಾರಿ।
ಈ ಜಗದಲಿ ಕವಿರಾಜ್ಯವ ತೋರಿ।
ತೇಜ ಮುತ್ತಿನ ಕವಚ ಕುಂಡಲಧಾರಿ।
ಪೂಜಿಪರ ಪಾಲಿಪೆ ಸುಜನರುಪಕಾರಿ॥
॥ ಲಾಲಿ ॥

ಭೂಮಿ ಭಾರವನಿಳುಹೆ ಬಂದೆ ಕಲಿಭೀಮ।
ಕಾಮಿ ಕೀಚಕನನ್ನು ಕುಟ್ಟಿ ರಣಧಾಮ।
ಭಾಮಿನಿ ದ್ರೌಪದಿ ಕಷ್ಟ ನಿರ್ಧೂಮ
ಕಾಮಿತಾರ್ಥಗಳಿತ್ತು ಸಲಹು ನಿಸ್ಸೀಮ॥
॥ ಲಾಲಿ ॥

ಸುಂದರ ರೂಪದ ಶ್ರೀಮದಾನಂದ।
ತಂದೆ ಹಯವದನನ ಮೋಹದ ಕಂದ।
ಬಂದು ಉಡುಪಿಯಲ್ಲಿ ನೆಲೆಯಾಗಿ ನಿಂದ।
ವಂದಿಸುವೆ ನಿದ್ರೆಗೈ ಹರಿಧ್ಯಾನದಿಂದ॥
॥ ಲಾಲಿ ॥

ನಿದ್ರೆಗೈಯುತ್ತಿರುವ ವಾಯುದೇವರನ್ನು ಭೂಪಾಳಿರಾಗದಿಂದ ಎಬ್ಬಿಸುವಾಗಲೂ ಅವತಾರ ತ್ರಯ ವರ್ಣನೆಯೇ ಪುರಂದರದಾಸರಿಗೆ ಅಚ್ಚುಮೆಚ್ಚು.

ಏಳು ಹನುಮಂತ ಎಷ್ಟು ನಿದ್ರೆ। ಮಾತ-
ನಾಡಲುಬೇಕು ಮುದ್ರಿಕೆ ತರಲು ಬೇಕು।

(28ನೇ ಪುಟ ನೋಡಿ)

# ಗೃಹಲಕ್ಷ್ಮಿ




ಅಹಂ ಸರ್ವಸ್ಯ ಪ್ರಭವಃ
ಮತ್ತಃ ಸರ್ವಂ ಪ್ರವರ್ತತೇ
ಇತಿ ಮತ್ವಾ ಭಜಂತೇ ಮಾಂ
ಬುಧಾ ಭಾವಸಮನ್ವಿತಾಃ

(ನಾನು ಸಮಸ್ತ ಜಗತ್ತಿಗೂ ಉತ್ಪತ್ತಿ ಕಾರಣನು ನನ್ನಿಂದಲೇ ಈ ಸಕಲವೂ ನಡೆಯುತ್ತಿದೆ ಎಂಬ ಸತ್ಯವನ್ನು ವಿವೇಕಿಗಳು ತಿಳಿದುಕೊಂಡು ಬಾವ ಸಮನ್ವಿತರಾಗಿ, ಪರಿಪೂರ್ಣ ಭಕ್ತಿಭಾವದಿಂದ ಕೂಡಿ ನನ್ನನ್ನು ಧ್ಯಾನಿಸುತ್ತಾರೆ)

ವಿಷ್ಟಭ್ಯಾಹಮಿದಂ ಕೃತ್ಸ್ನಂ
ಏಕಾಂಶೇನ ಸ್ಥಿತೋ ಜಗತ್

( ನಾನು ಈ ಜಗತ್ತನ್ನೆಲ್ಲ ಒಂದು ಅಂಶವಾಗಿ ವ್ಯಾಪಿಸಿದ್ದೇನೆ )

ಈ ಅನಂತ ಕೋಟಿ ಬ್ರಹ್ಮಾಂಡವೆಲ್ಲವೂ ಎಷ್ಟೇ ಅಪಾರವಾಗಿ ಗೋಚರಿಸುತ್ತಿದ್ದರೂ ಅದು ಭಗವಂತನ ಒಂದು ಅಂಶದಿಂದ ಮಾತ್ರ ವ್ಯಾಪಿಸಲ್ಪಟ್ಟು 'ಪಾದೋಽಸ್ಯ ವಿಶ್ವ ಭೂತಾನಿ, ತ್ರಿಪಾದ ಸ್ಯಾಮೃತಂ ದಿವಿ' ಎಂಬ ವಾಕ್ಯದ ಅರ್ಥವನ್ನೇ ವಿವರಿಸುತ್ತದೆ ಈ ತತ್ತ್ವದಿಂದ ನೋಡಿದರೆ 'ಜಗಮಂತಾ ರಾಮಮಯಂ' ಎಂಬಂತೆ ಈ ಜಗತ್ತಿನ ಪ್ರತಿಯೊಂದು ಕಣವೂ 'ಚರಾಚರಾತ್ಮರ ಪ್ರಪಂಚಗೇಹ' ನಾದ ಈಶ್ವರನಿಂದಲೇ ಮೂಡಿಬಂದು ಮತ್ತೇ ಅವನನ್ನೇ ಹೋಗಿ ಸೇರುತ್ತದೆ ಎಂಬುದು ಸರಳವಾಗುತ್ತದೆ 'ಅಲ್ಲಿದೆ ನಮ್ಮ ಮನೆ, ಇಲ್ಲಿ ಬಂದೆ ಸುಮ್ಮನೆ' ಎಂಬ ಅರಿವಿನಿಂದ ನಾವೂ ನಮ್ಮ ಸಕಲವೂ ಅವನಿಂದಲೇ ಮೂಡಿ, ಅವನ ಪ್ರೇರಣೆಯಿಂದಲೇ ನಡೆದು, ಅವನನ್ನೇ ಮತ್ತೆ ಸೇರುತ್ತೇವೆ.

ಶ್ರೀ ತುಲಸಿಯ ಕತೆ ಇದಕ್ಕೊಂದು ನಿದರ್ಶನ. ಭಗವಂತ ತನ್ನ ಲೀಲೆಯನ್ನು – ಮಹಿಮೆಯನ್ನು ಪ್ರಪಂಚಕ್ಕೆ ಕಾಣಿಸಲು, ಜಗದ ಜನಕ್ಕೆ ನೀತಿಯನ್ನೂ ರೂಪಿಸಲು ತನ್ನವರನ್ನೇ ಇಲ್ಲಿಗೆ ಕಳಿಸಿ ಮತ್ತೆ ತನ್ನ ಬಳಿಗೇ ಕರೆದುಕೊಂಡ ಒಂದು ಸನ್ನಿವೇಶ

ಭರತಭೂಮಿಯಲ್ಲಿ ತುಲಸಿಯ ಹಿರಿಮೆಯನ್ನೂ ಕೇಳದವರೂ, ತುಲಸಿಯನ್ನು ಅನುದಿನವೂ ಪೂಜಿಸದವರೂ, ಔಷಧಿಯಾಗಿಯೋ, ಪ್ರಸಾದವಾಗಿಯೋ, ತುಲಸಿಯನ್ನು ಸ್ವೀಕರಿಸದವರೂ ಆಘ್ರಾಣಿಸದವರೂ, ದರ್ಶನ ಪಡೆಯದವರೂ ಬಹುಶಃ ಇಲ್ಲವೆನ್ನಬಹುದು. ತುಲಸಿಯ ಬಹು ಸಂಕ್ಷೇಪವಾದ ಕಥೆ ಹೀಗಿದೆ.

ಹಿಂದೆ ರಾಧಾಕೃಷ್ಣರ ವಿಹಾರ ಕ್ಷೇತ್ರವಾದ ಗೋಲೋಕದಲ್ಲಿ ಶ್ರೀಕೃಷ್ಣನಿಗೆ ಆಪ್ತರಾದ ಎಂಟು ಮಂದಿ ಗೋಪಾಲರಲ್ಲಿ ಒಬ್ಬನಾದ ಸುಧಾಮನು ಸಂಬಂಧವನ್ನೂ ಮತ್ತು ತುಲಸಿಯೆಂಬ ಗೋಪಿಕೆಯೂ ಶ್ರೀಹರಿಯ ಸಂಬಂಧವನ್ನು ಪಡೆದಿದ್ದರು. ಭಗವಲ್ಲೀಲೆಯಂತೆ ಇವರೀರ್ವರೂ ರಾಧೆಯ ಶಾಪಕ್ಕೆ ಗುರಿಯಾಗಿ ಭೂಲೋಕದಲ್ಲಿ ಜನ್ಮ ತಾಳುತ್ತಾರೆ. ಕೃಷ್ಣಮಂತ್ರ ಪ್ರಭಾವದಿಂದ, ಇವರಿಬ್ಬರೂ ತ್ರಿಕಾಲ ಜ್ಞಾನಿಗಳು. ರಾಧಾ ಶಾಪ ಕಾರಣದಿಂದ ಸುಧಾಮಗೋಪನು ಶಂಖಚೂಡನೆಂಬ ದಾನವನಾಗಿಯೂ ತುಲಸಿಯೂ ಪವಿತ್ರವಾದ ವಂಶದಲ್ಲಿ ರಾಜಕುಮಾರಿಯಾಗಿಯೂ ಜನಿಸುತ್ತಾರೆ.

ಗೋವ್ರಜದಲ್ಲಿ ಗೋಪಿಕೆಯಾಗಿದ್ದ ತುಲಸಿಯು ಭೂಲೋಕದಲ್ಲಿ ಧರ್ಮಧ್ವಜರಾಜ ಮತ್ತು ಅವನ ರಾಣಿ ಮಾಧವಿಯ ಮಗಳಾಗಿ ಶುಭಗ್ರಹಗಳ ಅನ್ಯೋನ್ಯ ವೀಕ್ಷಣೆಯಿರುವ ಸುಮುಹೂರ್ತದಲ್ಲಿ ಕಾರ್ತೀಕ ಪೂರ್ಣಿಮಾ ಶುಕ್ರವಾರದಂದು ಹುಟ್ಟುತ್ತಾಳೆ. ಪರಮ ಮಂಗಳಕರಳೂ, ಶುಭಕರಳೂ, ಸುಂದರಿಯೂ ಆದ ಈ ಬಾಲಿಕೆಗೆ, ಯಾವ ಉಪಮೆಯೂ ಅಸಾಧ್ಯವಾಗಿ, ಪ್ರಾಜ್ಞರು 'ತುಲಸಿ' ಎಂಬ ಹೆಸರಿಡುತ್ತಾರೆ, ಈ ಬಾಲೆ ಚಿಕ್ಕವಳಾಗಿರುವಾಗಲೇ,

ಸರ್ವೈರ್ನಿಷಿದ್ಧಾ ತಪಸೇ
ಜಗಾಮ ಬದರೀವನಂ
ತತ್ರದೇವಾಬ್ಜ ಲಕ್ಷಂಚ
ಚಕಾರ ಪರಮಂ ತಪಃ

ಯಾರು ಎಷ್ಟು ಹೇಳಿದರೂ ಕೇಳದೆ ಬದರಿಕಾಶ್ರಮಕ್ಕೆ ಹೋಗಿ ದೇವಮಾನದ ಒಂದು ಲಕ್ಷ ವರುಷ ಕಾಲ ಉತ್ಕಟವಾದ ತಪಸ್ಸನ್ನು ಆಚರಿಸುತ್ತಾಳೆ, ಪರಮ ಪಾವನೆಯಾಗುತ್ತಾಳೆ.

ಸುಧಾಮನು ಶಂಖಚೂಡದಾನವನಾಗಿ ಜನ್ಮ ಪಡೆಯುತ್ತಾನೆ. ಪರಮ ವೈಷ್ಣವನಾಗಿ ಸಕಲ ಮಂಗಲಪ್ರದವಾದ ವಿಷ್ಣು ಕವಚವನ್ನು ಕಂಠದಲ್ಲಿ ಧರಿಸಿ ಸರ್ವವಿಜಯಿಯಾಗುತ್ತಾನೆ ಮಹಾ ಶೂರನೂ, ಬಲಶಾಲಿಯೂ ಆದ ಶಂಖಚೂಡನು ಜಗತ್ತಿನ ಅಣುವಿನಿಂದ ಬ್ರಹ್ಮದವರೆಗೆ ಎಲ್ಲವನ್ನೂ ತೃಣೀಕರಿಸುತ್ತಾನೆ, ದೇವತೆಗಳ ರಾಜ್ಯಗಳೆಲ್ಲವನ್ನೂ ಆಕ್ರಮಿಸಿಕೊಳ್ಳುತ್ತಾನೆ. ದೇವದಾನವಾದಿಗಳನ್ನೆಲ್ಲ ಗೆದ್ದ ಈತನು ಬ್ರಹ್ಮ ಸಂಕಲ್ಪದಂತೆ ತುಲಸಿಯನ್ನು ಕಂಡು ಗಾಂಧರ್ವ ವಿಧಿಯಿಂದ ಪರಿಗ್ರಹಿಸುತ್ತಾನೆ. ವಿಷ್ಣು ಕವಚದ ಜತೆಗೆ ತುಲಸೀ ದೇವಿಯ ಪಾತಿವ್ರತ್ಯದ ರಕ್ಷೆಯೂ ದೊರೆತು ಶಂಖಚೂಡನು ಅಜೇಯನಾಗುತ್ತಾನೆ

ತಮ್ಮ ತಮ್ಮ ಸ್ಥಾನಮಾನಗಳನ್ನು ಕಳೆದುಕೊಂಡ ಇಂದ್ರಾದಿ ದೇವತೆಗಳು ಬ್ರಹ್ಮನಿಂದಲೂ ಪರಮೇಶ್ವರನಿಂದಲೂ ಕೂಡಿ ವೈಕುಂಠದಲ್ಲಿ ಶ್ರೀಮನ್ನಾರಾಯಣನಲ್ಲಿ ತಮ್ಮ ಕಷ್ಟಗಳನ್ನು ನಿವೇದಿಸಿಕೊಳ್ಳುತ್ತಾರೆ, ಆಗ ದೇವತೆಗಳಿಗೆ ಶಂಖಚೂಡನ ವೃತ್ತಾಂತವನ್ನು ತಿಳಿಸಿದ ಮಹಾವಿಷ್ಣು, ಅವರ ಕಷ್ಟ ಪರಿಹಾರ ಮಾಡುವುದಾಗಿ ವಾಗ್ದಾನ ಮಾಡುತ್ತಾನೆ.

ಶಂಖಚೂಡನ ಸಂಹಾರಕ್ಕೆ ಲಯಕರ್ತನಾದ ಶಿವನೇ ನಿಯೋಜಿತನಾಗುತ್ತಾನೆ, ಶಿವನಿಗೇ ಎದುರಾಗಿ ಯುದ್ಧಸನ್ನದ್ಧನಾದ ಶಂಖಚೂಡನನ್ನು ಕುರಿತು ಆತಂಕಗೊಂಡ ತುಲಸಿಗೆ

ಉವಾಚ ವಚನಂ ಪ್ರಾಜ್ಞೋಹಿತಂ
ಸತ್ಯಂ ಯಥೋಚಿತಂ

ಪ್ರಾಜ್ಞನಾದ ಶಂಖಚೂಡನು ಹಿತವೂ, ಸತ್ಯವೂ, ಉಚಿತವೂ ಆದ ಮಾತುಗಳನ್ನು ಹೇಳುತ್ತಾನೆ.

"ಪ್ರಾರಬ್ಧ ಕರ್ಮರೂಪವಾದ ಶುಭಾಶುಭಗಳೂ, ಸುಖದುಃಖಗಳೂ, ಭಯಾಭಯಗಳೂ ಯಥಾಕಾಲದಲ್ಲಿ ಸಂಭವಿಸಲೇ ಬೇಕಾದ್ದು ವಿಧಿ ನಿಯಾಮಕ. ವೃಕ್ಷಗಳು ಹುಟ್ಟುವಾಗ ಸಸಿಗಳಾಗಿದ್ದು, ಕಾಲಕ್ರಮದಲ್ಲಿ ಬೆಳೆಯುತ್ತ, ದೊಡ್ಡ

ಶ್ರೀ ಎನ್. ಎಸ್. ಮೂರ್ತಿ

ನಾಗಿ ಫಲಿಸುತ್ತವೆ, ಚಿಗುರಾಗಿ, ಹೂವು, ಕಾಯಿ, ಹಣ್ಣುಗಳಾಗಿ ಅನಂತರ ಉರ್ವಾರು ಕದಂತೆ ತಾವಾಗಿ ತೊಟ್ಟು ಕಳಚಿಕೊಳ್ಳುತ್ತವೆ. ಇದೇ ರೀತಿಯಲ್ಲಿ ಕಾಲವಶವಾಗಿ, ಪ್ರಪಂಚವೆಲ್ಲವೂ ಹುಟ್ಟುತ್ತಲೂ ನಾಶವಾಗುತ್ತಲೂ ಇರುವುದು. ಸೃಷ್ಟಿ, ಸ್ಥಿತಿ, ಲಯಕಾರ್ಯಗಳು ನಿಯತವಾದ ಕಾಲಗಳಲ್ಲಿ ತ್ರಿಮೂರ್ತಿಗಳಿಂದ ನಡೆಯುವುವು. ತ್ರಿಮೂರ್ತಿಗಳಿಂದ ಭಿನ್ನವಾಗಿ ಪ್ರಕೃತಿ ದೇವಿಯೊಡಗೂಡಿದ ಈಶ್ವರನಿರುವನು, ಪ್ರಭುವಾದ ಪರಮಾತ್ಮನು ಕಾಲವನ್ನು ನರ್ತಕನಂತೆ ಕುಣಿಸುವನು, ಇಚ್ಛಾಶಕ್ತಿಯಿಂದ ಕೂಡಿ ಚರಾಚರಾತ್ಮವಾದ ಪ್ರಪಂಚವನ್ನು ನಿರ್ಮಿಸುವನು. ಸರ್ವೇಶ್ವರನೂ, ಸರ್ವಸ್ವರೂಪನು, ಸರ್ವಾತ್ಮನೂ, ಪರಮೇಶ್ವರನೂ ಆದ ಪ್ರಭುವು ಜನರನ್ನು ಜನರಿಂದಲೇ ನಿರ್ಮಿಸಿ ರಕ್ಷಿಸುತ್ತಲೂ ಇರುವನು, ವಾಯು ಬೀಸುವುದು, ಸೂರ್ಯನು ತಪಿಸುವುದು, ಇಂದ್ರನು ವರ್ಷಿಸುವುದು, ಮೃತ್ಯುವು ಜಂತುಗಳನ್ನು ನುಂಗುವುದು, ಅಗ್ನಿಯು ದಹಿಸುವುದು, ಚಂದ್ರನು ಶೀತಲನಾಗಿರುವುದು – ಇವೆಲ್ಲವೂ ನಡೆಯುವುದು ಸೃಷ್ಟಿ ಕರ್ತನ ತಂದೆಯೂ, ಸ್ಥಿತಿ ಕರ್ತನ ಪೋಷಕನೂ, ಮೃತ್ಯುವಿಗೆ ಮೃತ್ಯುವೂ, ಕಾಲನಿಗೆ ಕಾಲನೂ ಆದ ಆ ಪರಮಾತ್ಮನ ಆಜ್ಞೆಯಿಂದಲೇ. ಯಾರಿಗೆ ಯಾರು ಬಂಧುಗಳು ? ಆ ಸ್ವಾಮಿಯ ವಿನಾ ಬೇರೆ ಬಂಧುವೇ ಇಲ್ಲ, ಸರ್ವ ಬಂಧುವೂ ಅವನು ಮಾತ್ರವೇ, ನಾನೆಲ್ಲಿದ್ದೆನೋ ನೀನೆಲ್ಲಿದ್ದೆಯೋ, ಬ್ರಹ್ಮ ಸಂಘಟನೆಯಿಂದ ಕಾಲ ಕರ್ಮ ಸಂಯೋಗದಿಂದ ಇಬ್ಬರೂ ಸೇರಿದೆವು, ಈಗ ವಿಯೋಗದ ಕಾಲ ಪ್ರಾಪ್ತವಾಗಿದೆ. ಆದ್ದರಿಂದ ಅಗಲುತ್ತಿದ್ದೇವೆ.

ಆಪತ್ತಿನಲ್ಲಿ ಹೆದರಿ ದುಃಖಿಸುವುದು ಅಜ್ಞಾನಿಗಳ ರೀತಿ. ವಿಪತ್ತು ಬಂದಾಗ ಶೋಕಿಸದೆ ಧೈರ್ಯ ದೋರುವವನೇ ಜ್ಞಾನಿ. ಸುಖ ದುಃಖಗಳು ಚಕ್ರ ಸದೃಶವಾಗಿ ಕಾಲಕ್ರಮದಲ್ಲಿ ಪ್ರಾಪ್ತವಾಗುತ್ತದೆ.

ನೀನು ಪೂರ್ವದಲ್ಲಿ ಬದರಿಕಾಶ್ರಮದಲ್ಲಿ ಮಾಡಿದ ಶ್ರೇಷ್ಠ ತಪಸ್ಸಿನ ಫಲವಾಗಿ ನಾರಾಯಣನನ್ನೇ ಪತಿಯಾಗಿ ಪಡೆಯುವೆ, ಇದು ಎಂದಿಗೂ ತಪ್ಪದು. ತಪಃ ಪ್ರಭಾವದಿಂದಲೂ, ಬ್ರಹ್ಮನ ವರದಿಂದಲೂ ನಾನು ನಿನ್ನನ್ನು ಪಡೆದೆ, ನೀನು ಶ್ರೀಹರಿ ಪ್ರಾಪ್ತಿಗಾಗಿ ಮಾಡಿದ ತಪಸ್ಸು ಫಲಿಸುತ್ತದೆ. ಗೋಲೋಕದಲ್ಲಿಯೂ ಬೃಂದಾವನದಲ್ಲಿಯೂ ಶ್ರೀಕೃಷ್ಣನನ್ನು ಸೇರುವೆ, ನಾನು ಈ ರಾಕ್ಷಸ ಶರೀರವನ್ನು ತ್ಯಜಿಸಿ ಆ ಲೋಕಕ್ಕೆ ಹೋಗುವೆನು. ರಾಧಾ ಶಾಪದಿಂದಲ್ಲವೇ ರಾಕ್ಷಸನಾಗಿ ಜನಿಸಿದ್ದು. ಈಗ ಈ ದೇಹವನ್ನು ತ್ಯಾಗ ಮಾಡಿ ಸ್ವಸ್ಥಾನಕ್ಕೆ ಹೋಗುವ ಸನ್ನಿವೇಶ ಒದಗಿರುವಾಗ ಶೋಕವೇಕೆ? ನೀನೂ ಈ ಮಾನವ ದೇಹತ್ಯಾಗವಮಾಡಿ ದಿವ್ಯ ಶರೀರವನ್ನು ಪಡೆಯುವೆ ಅಂಜಲೇಕೆ ? ಶ್ರೀಹರಿಯೇ ನಿನಗೆ ಪತಿಯಾಗುವುದು ನಿಸ್ಸಂದೇಹ ! ”

ಶಿವ ಶಂಖಚೂಡರ ನಡುವಿನ ಯುದ್ಧವು ಆರಂಭವಾಯಿತಾದರೂ ಕೊನೆ ಮುಟ್ಟದಿರಲು, ಶ್ರೀಹರಿ ಒಂದು ಶಂಖಚೂಡನಿಗೆ ರಕ್ಷೆಯಾಗಿದ್ದ ಕೃಷ್ಣ ಕವಚವನ್ನೂ ತುಲಸೀದೇವಿಯ ಪಾತಿವ್ರತ್ಯವನ್ನೂ ಸೆಳೆದುಕೊಂಡುಬಿಡುತ್ತಾನೆ. ಶಂಖಚೂಡನು ದಿವ್ಯದೇಹಧಾರಿಯಾಗಿ ಗೋಲೋಕಕ್ಕೆ ಹಿಂತಿರುತ್ತಾನೆ.

ತುಲಸಿಯೂ ಮಾನವದೇಹವನ್ನು ತ್ಯಾಗ ಮಾಡಿ ದಿವ್ಯದೇಹವನ್ನು ತಳೆದು ಸಾಕ್ಷಾತ್ ಲಕ್ಷ್ಮೀದೇವಿಯಂತೆಯೇ ಹರಿವಕ್ಷಸ್ಥಲಾಲಯೆಯಾಗುತ್ತಾಳೆ.

ತುಲಸಿಯ ಶರೀರವು ಗಂಡಕೀ ನದಿಯಾಗಿ ಹರಿಯುತ್ತದೆ. ಆ ನದೀತೀರದಲ್ಲಿ ಪೂಜಿಸಲ್ಪಡುವ ಭಕ್ತರಿಗೆ ಪುಣ್ಯ ಫಲಗಳನ್ನು ಪ್ರಸಾದಿಸಲು ಶ್ರೀಹರಿ ಸಾಲಗ್ರಾಮ ಶಿಲೆಯಾಗುತ್ತಾ,

“ನೀನು ಸರ್ವರಿಗೂ ಪೂಜಾರ್ಹಳಾಗು, ಸರ್ವ ಮಂಗಳೆಯೂ, ಪರಮ ಸುಂದರಿಯೂ ಆದ ನಿನ್ನನ್ನು ನಾನು ಶಿರಸ್ಸಿನಲ್ಲಿಯೂ ವಕ್ಷಸ್ಥಲದಲ್ಲಿಯೂ ಧರಿಸುತ್ತೇನೆ” ಎಂದು ಅನೇಕವರಗಳನ್ನು ತುಲಸಿದೇವಿಗೆ ಕೊಟ್ಟು, ಅವಳನ್ನು ತನ್ನೊಡನೆಯೇ ಕರೆದು ಕೊಂಡು ವೈಕುಂಠವನ್ನು ಸೇರುತ್ತಾನೆ.

ಶ್ರೀತ್ಯಾಗರಾಜಸ್ವಾಮಿಗಳು ಹೇಳುವಂತೆ,
“ಏದಿ ಜೇಸಿನ ಜಗನ್ನಾಥುಡು ಶಿರಮುನ
ಹೃದಯಮುನ ವಹಿಂಚಿ
ಪದಿಲಮೈನ ಸತ್ಪಥ ಮೊಸಂಗು
ಬಾಟ ತ್ಯಾಗರಾಜ ನುತುನಿ ಭಜನರಾ ”

ಹೇಗೆ ಭಗವಂತನನ್ನು ಆಶ್ರಯಿಸಿದರೆ, ಅವನನ್ನೇ ಕೋರಿ ಧ್ಯಾನಿಸಿದರೆ, ಸ್ವಾಮಿ ಹದುಳವಾದ ಸತ್ಪಥವನ್ನು ಕೊಟ್ಟು ಭಕ್ತನನ್ನು ತನ್ನ ಶಿರಸ್ಸಿನಲ್ಲಿಯೂ ಹೃದಯದಲ್ಲಿಯೂ ಧರಿಸಿ ಅವನನ್ನು ಮರೆಯದೆ ಮರುಕತೋರುತ್ತಾನೋ, ಆ ರೀತಿ ನಡೆದು, ಸಾಧಿಸಿ ಶ್ರೀಹರಿಯ ಶಿರಸ್ಸಿನಲ್ಲಿಯೂ ಬೆಳಗುವ ಯೋಗ್ಯತೆ ಪಡೆದವಳು ತುಳಸಿದೇವಿ. ತುಲಸಿಯ ಸಂಗವಿಲ್ಲದೆ ‘ವನಮಾಲಿ’ ಎನ್ನಿಸಿಕೊಳ್ಳಲು ಶ್ರೀಹರಿಗೆ ಮನಸ್ಸಿಲ್ಲ.

ಶ್ರೀಹರಿಗೆ ಇಷ್ಟು ಪ್ರಿಯಳಾದ ಶ್ರೀ ತುಲಸಿಯ ಮಹಿಮೆಯನ್ನು ಮನಗಂಡ ತ್ಯಾಗಯ್ಯನವರು ತಾವು ಮಾಡುವ ಪೂಜೆಗಳಲ್ಲೆಲ್ಲ ತುಲಸಿಯೊಂದಿಗೆ ಪುಷ್ಪಾದಿಗಳನ್ನು ಭಗವಂತನಿಗೆ ಅರ್ಪಿಸುತ್ತಾರೆ.

ತುಲಸೀದಳಮುಲಚೇ ಸಂತೋಷಮುಗ
ಪೂಜಿಂತು
ತುಲಸೀಬಿಲ್ವ ಮಲ್ಲಿಕಾದಿ ಜಲಜಮುಲ
ಪೂಜಲ ಗೈಕೊನವೇ
ಸರಸಿಜಮಲ್ಲಿತುಲಸೀ ವಿರಜಾಜಿ ಪಾರಿಜಾತಪು
ವಿರುಲಚೇ ಪೂಜಿಂಚನಿ ಕರಮುಲೇಲ?

ಶ್ರೀಹರಿಯೇ ಸ್ವತಃ ತುಲಸಿಯನ್ನು –

ವೃಂದಾ, ವೃಂದಾವನೀ, ವಿಶ್ವ ಪೂಜಿತಾ
ವಿಶ್ವಪಾವನೀ ।
ಪುಷ್ಪಸಾರಾ ಆನಂದಿನೀ ಚ ತುಲಸೀ
ಕೃಷ್ಣಜೀವನೀ ॥

ಎಂದು ಪರಿಪರಿಯಾಗಿ ಸ್ತೋತ್ರ ಮಾಡಿಯೇ ಅಲ್ಲವೇ ಆಕೆಯನ್ನು ಪ್ರಸನ್ನಳಾಗಿ ಮಾಡಿಕೊಂಡದ್ದು.? ಅವಳನ್ನು ಶಿರಸ್ಸಿನಲ್ಲಿಯೂ ವಕ್ಷಸ್ಥಲದಲ್ಲಿಯೂ ಧರಿಸಿ ‘ವನಮಾಲಿ’ ಯಾದುದು?

ಶ್ರೀ ತ್ಯಾಗರಾಯರು ಶ್ರೀತುಲಸಮ್ಮನನ್ನು ಕುರಿತು ನಾಲ್ಕು ಕೃತಿಗಳನ್ನು ರಚಿಸಿದ್ದಾರೆ

ತುಲಸೀ ಜಗಜ್ಜನನಿ । ದುರಿತಾಪಹಾರಿಣಿ ॥
ನಿಲವರಮುಗು ನೀಸರಿವೇ ।
ಲ್ಪಲು ಲೇರಟ ಬ್ರೋವುಮಿಕನು ॥
ಚರಣಯುಗಂಬುಲು ನಮ್ಮಲಕು । ಪರಮ
ವೈಕುಂಠ ಮಟ ॥
ಸರಸಿಜಾಕ್ಷಿ ನೀ ಮಧ್ಯಮು । ಸಕಲ ಸುರಾ
ವಾಸಮಟ ॥
ಶಿರಮುನ ನೈಗಮು ಕೋಟುಲು । ಚೆಲುಗು
ಚುನುನ್ನಾರಟ ॥
ಸರಸ ತ್ಯಾಗರಾಜಾದಿ ವರ ಭಕ್ತುಲು
ಪಾಡೆದರಟ ॥ ತುಲಸೀ ॥

ಜಗಜ್ಜನನಿಯಾದ ತುಲಸಿಗೆ ಸಮಾನರಿಲ್ಲ.
ಪುಷ್ಪೇಷು ತುಲಸಾಯಸ್ಯ ನಾಸ್ತಿ ವೇದೇಷು
ಭಾಷಿತಂ

ಪುಷ್ಪಗಳಲ್ಲಿ ಯಾವುದಕ್ಕೆ ತುಲನೆ (ಸಮಾನತೆ) ಸಾಧ್ಯವಿಲ್ಲವೋ ಅದೇ ತುಲಸಿ ಎಂಬುದು ವೇದೋಕ್ತ. ತುಲಸೀಯುಕ್ತವಾದ ತೀರ್ಥವನ್ನು ಮರಣಕಾಲದಲ್ಲಾದರೂ ಸೇವಿಸಿದವನ ದುರಿತಾಪಹಾರವಾಗಿ ವೈಕುಂಠಪ್ರಾಪ್ತಿಯಾಗುತ್ತದೆ.

ತುಲಸೀ ದೇವಿಯ ಪಾದಗಳು ಸಕಲ ತೀರ್ಥಗಳಿಗೂ ಆಗರ, ಅವಳ ಮಧ್ಯವು ಸಕಲ ದೇವತೆಗಳ ಆವಾಸ ಸ್ಥಾನ, ಆಕೆಯ ಶಿರಸ್ಸಿನಲ್ಲಿ ವೇದಗಳೆಲ್ಲವೂ ನೆಲಸಿವೆ. ಈ ಪರಿಯ ಮಹಿಮಾನ್ವಿತೆಯೂ ಭಕ್ತಾಶ್ರಯಳೂ ಆದ ತುಲಸಿ ನಮ್ಮನ್ನು ರಕ್ಷಿಸಲಿ.

ದೇವೀ ಶ್ರೀತುಲಸಮ್ಮ

ಪ್ರೋಚುಟಕಿದಿ ಸಮಯಮಮ್ಮ ।
ಮಾಯಮ್ಮ ॥ ದೇವಿ ॥

ಪಾವನಿ. ಬ್ರಹ್ಮೇಂದ್ರಾದುಲು ನೀ ಭಕ್ತಿಚೇ
ವಿಲಸಿಲ್ಲಿರಟೆ ಮಹಾ ॥ ದೇವಿ ॥

ನೀವುಲೇಕ ಶಂಕರ ಮಾರಮಣುಲು
ನೀರಜಾದುಲನೊಲ್ಲರಟೆ

ನೀವುಲೇಕ ತೀರ್ಥಮು ಸೇವಿಂಚುಟೆ
ನೀರನುಚು ಪೇರಾಯೆನಟೆ

ನೀವುಲೇಕ ತ್ರಾಸುನ ಶ್ರೀಹರಿ ಸರಿನಿಲ್ವಕ
ಪೋಯೆನಟೆ

ನೀವುಲೇಕ ವನಮಾಲಿಯನಿ ಒಪ್ಪೆಪದಾ ನೀಸರಿ

ಯೆವ್ವರೇ ತ್ಯಾಗರಾಜನುತ ಮಹಾ ದೇವಿ

ತುಲಸಮ್ಮನ ಮಹಾಮಹಿಮೆ ಎಷ್ಟು ಹೇಳಿದರೂ ತೀರದು. ಪರಮ ಪಾವನೆಯಾದ ಆ ತಾಯಿಯಲ್ಲಿ ಭಕ್ತಿ ಮಾಡಿಯೇ ಬ್ರಹ್ಮೇಂದ್ರಾದಿಗಳು ಖ್ಯಾತರಾಗಿದ್ದಾರೆ, ತುಲಸಿಯಿಲ್ಲದ ತಾವರೆಯನ್ನೇ ಆದರೂ ಶಂಕರ ಮಾರಮಣರು ಒಲ್ಲರು.

ತುಲಸೀ ಪತ್ರತೋಯೇನ ಯೋಽಭಿಷೇಕಂ
ಸಮಾಚರೇತ್

ಸುಧಾಘಟ ಸಹಸ್ರಾಣಾಂ ಯಾತುಷ್ಟಿಸ್ತು

ಸಹಸ್ರ ಅಮೃತ ಕಲಶಗಳಿಂದ ಶ್ರೀಹರಿಗೆ ಅಭಿಷೇಕ ಮಾಡಿದರೆ ಎಷ್ಟು ಸಂತೋಷಗೊಂಡು ಉತ್ತಮ ಫಲಗಳನ್ನು ನೀಡುವನೋ, ತುಲಸೀ ಪತ್ರಯುಕ್ತವಾದ ಜಲದ ಅಭಿಷೇಕದಿಂದಲೂ ಅಷ್ಟೇ ತುಷ್ಟನಾಗಿ, ಸಹಸ್ರ ಸುಧಾ ಕಲಶಾಭಿಷೇಕದ ಫಲವನ್ನೇ ಕೊಡುತ್ತಾನೆ, ಆದರೆ ತುಲಸಿ ಇಲ್ಲದ ಎಂಥ ತೀರ್ಥವಾದರೂ ಕೇವಲ 'ನೀರು' ಎನ್ನಿಸಿಕೊಳ್ಳುತ್ತದೆ. ಬ್ರಹ್ಮಾಂಡವನ್ನೇ ಕುಕ್ಷಿಯಲ್ಲಿ ಧರಿಸಿದ ಶ್ರೀಕೃಷ್ಣನ ತುಲಾಭಾರದಲ್ಲಿ ಒಂದು ತುಲಸೀದಳ ಬೀಳುವವರೆಗೆ ಕೃಷ್ಣ ಸರಿದೂಗಲಿಲ್ಲ. ತುಲಸೀ ಮಾಲಾಧಾರಿಯಾಗಿಯೇ ತಾನೇ ಶ್ರೀಹರಿ ವನಮಾಲಿಯೆನಿಸಿದ? ಈ ಮಹಾದೇವಿಯೇ ನಮ್ಮನ್ನು ಕಾಯಬೇಕು.

ಶ್ರೀತುಲಸಮ್ಮ ಮಾಯಿಂಟಿ ನೆಲಕೊನವಮ್ಮ ॥
ಈ ಮಹಿನಿ ನೀಸಮಾನಮೆವರಮ್ಮ,
ಬಂಗಾರುಬೊಮ್ಮ ? ॥

ಕರುಕು ಸುವರ್ಣಪು ನೊಮ್ಮುಲ ಪೆಟ್ಟಿ
ಸರಿಗೆ ಚೀರ ಮುದ್ದುಗುರಿಯಗ ಕಟ್ಟಿ
ಕರುಣ ಜೂಚಿ ಸಿರುಲನುಯೊಡಿಗಟ್ಟಿ
ವರದುನಿ ಕರಮುನ ಬಟ್ಟಿ
ಉರಮುನ ಮುತ್ಯಪು ಸರುಲ ಸಿಯಾಡ
ಸುರತರುಣುಲು ನಿನು ಗನಿ ಗೊನಿಯಾಡ
ವರಮುನುಲಷ್ಟದಿಗೀಶುಲು ವೇಡ
ವರದುಡು ನೀನು ಪ್ರೇಮನು ಜೂಡ
ಮರುವಕ ಪಾರಿಜಾತ ಸರೋಜ
ಕುರುವಕ ವಕುಳ ಸುಗಂಧರಾಜ
ವರಸುಮಮುಲಚೇ ತ್ಯಾಗರಾಜ
ವರದ ನಿನು ಪೂಜಸೇತು

ಕನಕದ ಪುತ್ಥಳಿ, ಪರಮ ಮಂಗಳೆ ಶ್ರೀತುಲಸಮ್ಮ ನಮ್ಮ ಮನೆಯಲ್ಲಿ ನೆಲೆಸಿ ಕಸಿಕೆಂಪುವಸ್ತ್ರದ ಚೀರೆ ಅನುಪಮವಾದ ತಾಯಿ ಸುವರ್ಣಾಭರಣಗಳನ್ನು ಧರಿಸಿ, ಮುದ್ದು ಸುರಿಯುವಂತೆ ಸರಿಗೆ ಸೀರೆ ಯುಟ್ಟು, ಬೇಡಿದ ಭಕ್ತರಿಗೆ ನೀಡಲು ಮಡಿಲು ತುಂಬ ಸಿರಿಸಂಪದಗಳನ್ನು ತುಂಬಿಕೊಂಡು ಸದಾ ವರದನ ಕೈಹಿಡಿದು ನಮ್ಮ ಮನೆಯಲ್ಲಿರಬೇಕು. ವಕ್ಷಸ್ಥಲದಲ್ಲಿ ಮುತ್ತಿನಸರ ಓಲಾಡುತ್ತಿದೆ, ಸುರತರುಣಿಯರು ಕೊಂಡಾಡುತ್ತಿದ್ದಾರೆ, ವರಮುನಿಗಳೂ ದಿಕ್ಪಾಲಕರೂ ಪ್ರಾರ್ಥನೆ ಸಲ್ಲಿಸುತ್ತಿದ್ದಾರೆ, ವರದನು ಪ್ರೇಮ ತುಂಬಿದ ಕಣ್ಣುಗಳಿಂದ ತುಲಸಮ್ಮನನ್ನೇ ನೋಡುತ್ತಿದ್ದಾನೆ. ಮರುಗ ಪಾರಿಜಾತ, ಕಮಲ, ಗೋರಂಟಿ, ಪಗಡೆ, ಸುಗಂಧರಾಜ ಮುಂತಾದ ಉತ್ತಮ ಪುಷ್ಪಗಳನ್ನು ಸಮರ್ಪಿಸೋಣ, ಆ ತಾಯಿ ಒಲಿದರೆ ಮನೆಯಲ್ಲಿ ಭಾಗ್ಯ ಬೆಳಗುತ್ತದೆ.

ಅಮ್ಮ ರಾವಮ್ಮ ತುಲಸಮ್ಮ ನನು ಪಾಲಿಂಪ
ವಮ್ಮ ಸತತಮು ಪದಮುಲೇ ನಮ್ಮಿನಾನಮ್ಮ!
ನೆಮ್ಮದಿನಿ ನೀವಿಹಪರಮ್ಮ
ಲೊಸಗುದುವನುಚು
ಕಮ್ಮ ವಿಲ್ತುನಿ ತಂಡ್ರಿ ಕಲನೈನ ಬಾಯಡಟ॥
ನೀ ಮೃದುತನುವುನುಗನಿ, ನೀಪರಿಮಳ
ಮುನುಗನಿ,
ನೀ ಮಹತ್ವಮುನುಗನಿ, ನೀರಜಾಕ್ಷೀ
ತಾಮರ ಸದಳ ನೇತ್ರ, ತ್ಯಾಗರಾಜುನಿ ಮಿತ್ರ
ಪ್ರೇಮತೋ ಶಿರಮುನನು ಬೆಟ್ಟು
ಕೊನ್ನಾಡಟ ॥ ಅಮ್ಮ ॥

ಶ್ರೀತುಲಸಮ್ಮ, ನಿನ್ನ ಪಾದಗಳನ್ನೇ ನಂಬಿದೆನಮ್ಮ, ಬಂದು ನನ್ನನ್ನು ಪಾಲಿಸುಮ್ಮ, ಇಹಪರಗಳೆರಡರಲ್ಲಿಯೂ ಭಕ್ತರಿಗೆ ನೆಮ್ಮದಿಯನ್ನು ಅನುಗ್ರಹಿಸ ಬಲ್ಲತಾಯಿ ನೀನು. ಆದರಿಂದಲೇ ಮದನ ಜನಕನಾದ ಶ್ರೀಹರಿ ಕನಸಿನಲ್ಲಾದರೂ ನಿನ್ನನ್ನು ಬಿಟ್ಟಿರಲಾರನಂತೆ, ನಿನ್ನ ಮೃದುತನುವನ್ನೂ, ನಿನ್ನ ಪರಿಮಳವನ್ನೂ, ನಿನ್ನ ಮಹತ್ವವನ್ನೂ ಕಂಡ, ತ್ಯಾಗರಾಜನ ಮಿತ್ರನಾದ ನೀರಜಾಕ್ಷನು ನೀರಜಾಕ್ಷಿಯಾದ ನಿನ್ನನ್ನು 'ಅಹಂ ತ್ವಾಂ ಧಾರಯಿಷ್ಯಾಮಿ ಸುರೂಪಾಂ ಮೂರ್ಧ್ನಿ' ಎಂದು ಶಿರದಲ್ಲಿ ಧರಿಸಿದನಂತೆ, ಅಮ್ಮ, ತುಲಸಮ್ಮ, ಬಾರಮ್ಮ,

ಮುಂಡಕೋಪನಿಷತ್ತು ಪರಮಾತ್ಮನನ್ನೂ ಜೀವನನ್ನೂ 'ದ್ವಾ ಸುಪರ್ಣಾ', –ಎರಡು ಹಕ್ಕಿಗಳಿಗೆ ಹೋಲಿಸುತ್ತದೆ, ಒಂದೇ ಮರದ ಮೇಲಿನ ಈ ಎರಡು ಹಕ್ಕಿಗಳೂ ಅನ್ಯೋನ್ಯವಾಗಿಯೂ ಪ್ರೀತಿಯಿಂದಲೂ ಇವೆ, ಒಂದು ಹಕ್ಕಿ ಮೇಲಿನ ಕೊಂಬೆಯ ಮೇಲಿದ್ದರೆ ಒಂದು ಕೆಳಗಿನ ಕೊಂಬೆಯ ಮೇಲಿದೆ. ಮೇಲಿನ ಪಕ್ಷಿ ಶಾಂತವಾಗಿ ಗಂಭೀರವಾಗಿದೆ. ಅದು ಏನನ್ನೂ ತಿನ್ನುವುದಿಲ್ಲ ಸ್ವಯಂ ಪರಿಪೂರ್ಣವಾಗಿ ಆನಂದಾನುಭವದ ಸ್ಥಿತಿಯಲ್ಲೇ ಇದೆ. ಆದರೆ ಕೆಳಗಿನ ಹಕ್ಕಿ ಸಂಸಾರವೆಂಬ ವೃಕ್ಷದಲ್ಲಿನ ಸಿಹಿ ಕಹಿ ಫಲಗಳೆಲ್ಲವನ್ನೂ ಭೋಗಿಸುತ್ತ ಕಷ್ಟ ಸುಖಗಳನ್ನನುಭವಿಸುತ್ತ, ಶಾಂತಿಯನ್ನೂ ಸೌಖ್ಯವನ್ನೂ ಅರಸುತ್ತ ತೊಳಲುತ್ತಿದೆ ಅತ್ಯಂತ ದಾರುಣವಾದ ಇಂದ್ರಿಯಾನುಭವಗಳ ಸಂದರ್ಭದಲ್ಲಿ ಕೆಳಗಿನ ಹಕ್ಕಿ ಒಮ್ಮೊಮ್ಮೆ ಸುಖದುಃಖಗಳಿಗೆ ಅತೀತವಾದ ಮೇಲಿನ ಹಕ್ಕಿಯತ್ತ ನೋಡುವುದು, ಮತ್ತೆ ಜೀವನದ ಸಿಹಿ ಕಹಿಗಳ ಭೋಗದಲ್ಲಿ ತೊಡಗುವುದು. ಪೆಟ್ಟುಬಿದ್ದಂತೆಲ್ಲ, ಸಂಸ್ಕಾರ ಉತ್ತಮಗೊಂಡಂತೆಲ್ಲ ಕೆಳಗಿನ ಹಕ್ಕಿ ಸ್ವಲ್ಪ ಸ್ವಲ್ಪವಾಗಿ ಮೇಲಕ್ಕೆ ಏರುತ್ತ 'ಅಂಕೋಲಂ ನಿಜ ಬೀಜ ಸಂತತಿರಯಸ್ಕಾಂತೋಪಲಂ ಸೂಚಿಕಾ' ಎಂಬಂತೆ ಅಂಕೋಲ ಬೀಜಗಳು ತಮಗೆ ಜನ್ಮ ಕೊಟ್ಟ ಮರದೆಡೆಗೂ, ಸೂಚಿಯು ಅಯಸ್ಕಾಂತದೆಡೆಗೂ, ಪತಿವ್ರತೆಯು ತನ್ನ ಪತಿಯೆಡೆಗೂ, ಬಳ್ಳಿಯು ಮರದಿಂದಲೂ ನದಿಯು ಸಾಗರದಿಂದಲೂ ಆಕರ್ಷಿತವಾಗುವಂತೆ ಸ್ವಲ್ಪ ಸ್ವಲ್ಪವಾಗಿ ಮೇಲಿನ ಹಕ್ಕಿಯಕಡೆಗೆ ಏರುತ್ತ, ಅದರ ಬಳಿಸಾರಿದಂತೆಲ್ಲ ಒಂದು ಆನಂದವನ್ನೂ ತೃಪ್ತಿಯನ್ನೂ ಅನುಭವಿಸುತ್ತದೆ, ಮೇಲಿನ ಹಕ್ಕಿಯ ಕಾಂತಿ, ಪ್ರಭಾವ ಪ್ರೇಮಗಳನ್ನು ಅನುಭವಿಸುತ್ತ ಅದನ್ನು ಸಮೀಪಿಸಿದಂತೆಲ್ಲ ಕೆಳಗಿನ ಹಕ್ಕಿ ಕಾಣೆಯಾಗುತ್ತದೆ, ಮೇಲಿನ ಹಕ್ಕಿ ಒಂದೇ ಉಳಿಯುತ್ತದೆ. ವಾಸ್ತವವಾಗಿ ಕೆಳಗಿನ ಹಕ್ಕಿ

( 22 ನೇ ಪುಟ ನೋಡಿ )



# ಚತುರ್ವಿಧ ಈಶ್ವರೋಪಾಸನೆ

ಶ್ರೀ ನರಸಿಂಹ ಬ್ರಹ್ಮಚಾರಿ

ಪ್ರಾಕೃತ ಬ್ರಹ್ಮಾಂಡದಲ್ಲಿ ವಾಸಿಸುವ ಜಡ ಜೀವಿಗಳ ಸಂಖ್ಯೆಯು ಅನಂತವಾದುದು. ಶ್ರೀ ವಿಷ್ಣುಪುರಾಣದ ಪ್ರಮಾಣದಂತೆ ಅನಂತಕೋಟಿ ಸಂಖ್ಯೆಯಿಂದ ಕೂಡಿದ ಈ ಜೀವಾತ್ಮರು ತಮ್ಮ ತಮ್ಮ ಕರ್ಮಫಲಗಳಿಗೆ ಅನುಗುಣವಾಗಿ ೮೪ ಲಕ್ಷ ವಿಧವಾದ ಯೋನಿಗಳಲ್ಲಿ ಭ್ರಮಣವನ್ನು ಗೈಯು ತ್ತಿರುತ್ತಾರೆ. ಜಲಜಾತ ಜೀವಿಗಳಲ್ಲಿ ೯ ಲಕ್ಷ, ಸ್ಥಾವರ ಜೀವಿಗಳಲ್ಲಿ ೨೦ ಲಕ್ಷ, ಕ್ರಿಮಿಕೀಟಗಳಲ್ಲಿ ೧೧ ಲಕ್ಷ, ಪಕ್ಷಿಗಳಲ್ಲಿ ೧೦ ಲಕ್ಷ, ಪಶುಗಳಲ್ಲಿ ೩೦ ಲಕ್ಷ, ಹಾಗೂ ಮಾನವರಲ್ಲಿ ೪ ಲಕ್ಷ — ಈ ವಿಧ ವಾಗಿ ಜಗತ್ತಿನ ಜೀವಿಗಳು ವಿಭಾಗಿಸಲ್ಪಟ್ಟಿವೆ. ಇವುಗಳಲ್ಲಿ ಚಲನಶಕ್ತಿ ವಿಹೀನವಾದ ಜೀವಿಗಳು ಸ್ಥಾವರಗಳೆಂದೂ, ಚಲನ ಶಕ್ತಿಯುಕ್ತವಾದ ಜೀವಿಗಳು ಜಂಗಮಗಳೆಂದೂ ಕರೆಯಲ್ಪಡುತ್ತವೆ. ಸ್ಥಳಚರ, ಜಲಚರ ಹಾಗೂ ಖೇಚರ ರೂಪದ ಜಂಗಮ ಜೀವಿಗಳಲ್ಲಿ ಮಾನವರ ಸಂಖ್ಯೆಯು ತುಲನಾತ್ಮಕವಾಗಿ ಅತ್ಯಲ್ಪವಾದುದಾಗಿದೆ. ಭಗವಂತನಿಂದ ಸೃಷ್ಟಿಯಾದ ಈ ಸಮಸ್ತ ಜೀವರಲ್ಲಿ ಮಾನವರೇ ಶ್ರೇಷ್ಠರಾದವರು. ವಿಚಾರ ಶಕ್ತಿ, ಬುದ್ಧಿಶಕ್ತಿ ಹಾಗೂ ಯುಕ್ತಾಯುಕ್ತ ವಿವೇಕ ಜ್ಞಾನಗಳಿಂದ ಕೂಡಿರುವುದೇ ಮಾನವನ ಶ್ರೇಷ್ಠತೆಯ ಕಾರಣವಾಗಿದೆ. ಮಾನವರಲ್ಲಿಯೂ ಬಹುಸಂಖ್ಯಾಕರು ಅಧರ್ಮಾಚಾರಿಗಳು ಹಾಗೂ ಭಗವದ್ವಿಷಯದಲ್ಲಿ ಅಜ್ಞರು. ಧರ್ಮಶಿಕ್ಷೆಗಳ ಹಾಗೂ ಸುಯೋಗ್ಯರಾದ ಪಥಪ್ರದರ್ಶಕರ ಅಭಾವ, ನಾಸ್ತಿಕ ಮತವಾದಗಳ ಪ್ರಚಾರ, ಜಡ ಜಗತ್ತಿನಲ್ಲಿ ಅಧಿಕವಾದ ಆಸಕ್ತಿ, ಯಾಂತ್ರಿಕ ಜೀವನಮಯವಾದ ನಾಗರಿಕತೆ ಇತ್ಯಾದಿಗಳು ಮಾನವರನ್ನು ಮೋಹಗ್ರಸ್ತರನ್ನಾಗಿ ಮಾಡಿ ಧರ್ಮಪಥದಿಂದ ಭ್ರಷ್ಟತೆಯನ್ನು ಉಂಟು ಮಾಡುತ್ತವೆ

ದೇಶವಿದೇಶಗಳ ಹಾಗೂ ದ್ವೀಪ-ದ್ವೀಪಾಂತರ ಗಳಲ್ಲಿ ವಾಸಿಸುವ ಮಾನವ ವೃಂದದ ಇತಿಹಾಸ ಮತ್ತು ವೃತ್ತಾಂತಗಳನ್ನು ಆಲೋಚಿಸಿದಲ್ಲಿ ಸ್ಪಷ್ಟ ವಾಗಿ ಪ್ರತೀತವಾಗುವುದೇನೆಂದರೆ, ಈಶ್ವರ ವಿಶ್ವಾಸವು ಮಾನವಜಾತಿಯ ಒಂದು ಸಾಧಾರಣ ಧರ್ಮವಾಗಿದೆ. ಅಸಭ್ಯರಾದ ವನ್ಯಮಾನವರು ಪಶುಗಳಂತೆ ಅನಾಗರಿಕವಾಗಿ ಕಾಲಾತಿಪಾತ ವನ್ನು ಮಾಡಿದರೂ ಕೂಡ ಈಶ್ವರವಿಶ್ವಾಸದ ಕಿಂಚಿತ್ತಾದ ಲಕ್ಷಣಗಳನ್ನು ಅವರಲ್ಲಿ ಕಾಣ ಬಹುದು. ಸೂರ್ಯ, ಚಂದ್ರ, ಬೃಹತ್ತಾದ ಪರ್ವತಗಳು, ನದಿಗಳು, ಪ್ರಶಾಂತವಾದ ವನ ಗಳು ಇತ್ಯಾದಿಗಳನ್ನು ಅವರು ಕೃತಜ್ಞತಾ ಸೂಚಕವಾಗಿಯೂ, ಗೌರವಸೂಚಕವಾಗಿಯೂ ನಮಸ್ಕರಿಸಿ ಪೂಜಿಸುತ್ತಾರೆ ಜಾಗತಿಕ ಸಭ್ಯತೆಯ ಪ್ರಭಾವದಿಂದ ಮಾನವನ ಹೃದಯವು ಕುತರ್ಕ ಗ್ರಸ್ತವಾದಲ್ಲಿ ಮಾತ್ರ ನಾಸ್ತಿಕತೆ, ಜಡವಾದ, ಸಂದೇಹವಾದ, ಅನಾತ್ಮವಾದ, ನಿರೀಶ್ವರವಾದ ಇತ್ಯಾದಿಗಳಾದ ದುಷ್ಟ ಮತವಾದಗಳು ಚಿತ್ತ ವನ್ನು ಆಕ್ರಮಿಸುವುವು

ಧಾರ್ಮಿಕರೆಂದು ಕರೆಯಲ್ಪಡುವ ಮಾನವರು ಪರಮೇಶ್ವರನ ತುಷ್ಟಿಯ ಸಲುವಾಗಿ ಗೈಯುವ ಸಾಧನೆಗಳಲ್ಲಿ ನಾಲ್ಕು ವಿಧವಾದ ಕಾರಣಗಳನ್ನು ಕಾಣಬಹುದು. ಇವುಗಳು ಅನುಕ್ರಮವಾಗಿ.— ಭಯ, ಆಸೆ, ಕರ್ತವ್ಯ ಬುದ್ಧಿ ಹಾಗೂ ಅನುರಾಗ. ಈ ಸಂಬಂಧವಾಗಿ ಶ್ರೀಮದ್ಭಗವದ್ಗೀತೆಯಲ್ಲಿ ಭಗವಾನ್ ಶ್ರೀಕೃಷ್ಣನ ನಿಮ್ನ ಲಿಖಿತ ಉಕ್ತಿ ಯನ್ನೂ ವಿಚಾರಿಸಬಹುದು.

ಚತುರ್ವಿಧಾ ಭಜಂತೇ ಮಾಂ
ಜನಾಃ ಸುಕೃತಿನೋಽರ್ಜುನ ।
ಆರ್ತೋ ಜಿಜ್ಞಾಸುರರ್ಥಾರ್ಥೀ
ಜ್ಞಾನೀ ಚ ಭರತರ್ಷಭ ॥

ಭಯದ ಕಾರಣವಾಗಿ ಈಶ್ವರಭಜನೆಯನ್ನು ಗೈಯುವವರು ರೋಗಭಯ, ಮೃತ್ಯುಭಯ, ನರಕ ಭಯ, ಶತ್ರುಭಯ, ವಿಪತ್ತಿನಭಯ, ತಾಪತ್ರಯ ಗಳಭಯ ಇತ್ಯಾದಿಗಳಿಂದ ಮುಕ್ತಿಯನ್ನು ಗಳಿ ಸುವುದೇ ಪ್ರಧಾನವಾದುದೆಂದು ತಿಳಿದಿರುತ್ತಾರೆ. ಮಾನವರು ವಿವಿಧ ಭಯಗಳಿಂದ ರಕ್ಷೆಯನ್ನು ಹೊಂದುವ ಸಲುವಾಗಿ ತಮ್ಮ ದೈಹಿಕ ಬಲ ಹಾಗೂ ಬುದ್ಧಿಬಲಗಳ ಮೂಲಕವಾಗಿ ನಾನಾ ವಿಧವಾದ ಉಪಾಯಗಳನ್ನು ಸೃಜಿಸಿದರೂ, ಸಮಸ್ತ ವಿಪತ್ತುಗಳಿಂದ ಬಿಡುಗಡೆಯನ್ನು ಗಳಿಸುವುದು ಮನುಷ್ಯಪ್ರಯತ್ನಕ್ಕೆ ಅತೀತವಾದು ದರಿಂದ ಸರಳಹೃದಯದ ಸಾಧಾರಣ ಮಾನವರು ಇದಕ್ಕಾಗಿ ಈಶ್ವರನ ಶರಣಾಗುತ್ತಾರೆ. ಆದರೆ ಕೇವಲವಾಗಿ ಭಯದ ಕಾರಣವಾಗಿ ಗೈಯುವ ಈಶ್ವರೋಪಾಸನೆಯು ಕನಿಷ್ಠಮಟ್ಟದ ಉಪಾಸನೆ ಯಾಗಿದೆ.

ದ್ವಿತೀಯ ವಿಧವಾದ ಉಪಾಸಕರ ಉಪಾಸನೆಯ ಉದ್ದೇಶವು ಜಾಗತಿಕ ಹಾಗೂ ಸ್ವರ್ಗ ಸುಖ ಗಳನ್ನು ಗಳಿಸುವ ಆಸೆಯಿಂದ ಕೂಡಿದುದಾಗಿದೆ. ಅವರು ಪರಮೇಶ್ವರನಲ್ಲಿ ಧನ, ಕನಕ, ಸಂತಾನ, ಸಂಪತ್ತು, ಭೂಮಿ, ಗೃಹ, ವ್ಯಾಪಾರವಾಣಿಜ್ಯ ಗಳಲ್ಲಿ ಏಳಿಗೆ, ಪರೀಕ್ಷೆ ಹಾಗೂ ವಿವಾದಗಳಲ್ಲಿ ಜಯ, ಜಾಗತಿಕ ಕೀರ್ತಿ, ಇಹಪರಗಳಲ್ಲಿ ಸುಖ, ಸಂಸಾರಮುಕ್ತಿ ಇತ್ಯಾದಿಗಳಿಗಾಗಿ ಬೇಡುವರು. ಈಶ್ವರೋಪಾಸಕರಲ್ಲಿ ಭಯ ಹಾಗೂ ಆಸೆಗಳಿಂದ ಚಾಲಿತರಾಗುವವರ ಸಂಖ್ಯೆಯೇ ಬಹುವಾಗಿದೆ. ದೇವಾಲಯ, ಗುಡಿ ಇತ್ಯಾದಿಗಳನ್ನು ಸಂದರ್ಶಿಸು ವವರಲ್ಲಿ ಯಾವುದಾದರೊಂದು ಭಯದ ಅಥವಾ ಆಸೆಯ ಸಲುವಾಗಿ ಈಶ್ವರನಲ್ಲಿ ಪ್ರಾರ್ಥಿಸದವರು ಅತ್ಯಂತ ವಿರಳವಾಗಿರುವರು. ತಮ್ಮ ಆಸೆಗಳಿಗೆ ಅನುರೂಪವಾದ ಫಲಗಳನ್ನು ಪಡೆಯುವ ಉದ್ದೇಶ ದಿಂದ ಅವರು ಈಶ್ವರನಲ್ಲಿ ಕಾಣಿಕೆಗಳನ್ನು ಸಮರ್ಪಿಸುವರು.

ಈಶ್ವರೋಪಾಸನೆಯ ಫಲವಾಗಿ ಮಾನವರು ಈಪ್ಸಿತಾರ್ಥಗಳನ್ನು ಪಡೆಯುವರಾದರೂ, ಈಶ್ವರ ಭಜನೆಯಲ್ಲಿ ಭಯದ ಹಾಗೂ ಆಸೆಯ ಮನೋ ವೃತ್ತಿಗಳು ನಿತಾಂತ ಹೇಯವಾದವುಗಳಾಗಿವೆ. ಈ ರೀತಿಯ ಸಾಧಕರ ಬುದ್ಧಿವೃತ್ತಿಗಳು ಉನ್ನತ ವಾದಲ್ಲಿ ಅವರು ಭಯ ಹಾಗೂ ಆಸೆಗಳ ಭಾವ ಗಳನ್ನು ಪರಿತ್ಯಾಗಮಾಡಿ ಏಕಮಾತ್ರವಾಗಿ ಕರ್ತವ್ಯ ಬುದ್ಧಿಯನ್ನು ಆಶ್ರಯಿಸುವರು. ಪರಮೇಶ್ವರನ ಪ್ರತಿಯಾಗಿ ವಿಮಲ ಅನುರಾ ಗವು ಹೃದಯದಲ್ಲಿ ಜನಿಸುವತನಕ ಸಾಧಕರು ಕರ್ತವ್ಯಬುದ್ಧಿಯನ್ನು ಪೋಷಿಸುವರು. ಈ ರೀತಿಯ ತೃತೀಯ ವಿಧದ ಸಾಧಕರಲ್ಲಿ ಕೆಲವರು ತಮ್ಮ ಕರ್ತವ್ಯಬುದ್ಧಿಯನ್ನು ಯುಕ್ತಿಯ ಮೂಲಕವಾಗಿ ಸ್ಥಿರಗೊಳಿಸಿರುತ್ತಾರೆ ಆದರೆ, ಪರಮೇಶ್ವರ ತತ್ತ್ವದಲ್ಲಿ ಮಾನವಯುಕ್ತಿಯು ಪ್ರವೇಶಿಸಲಾರದುದರಿಂದ ಈ ತರದ ಕಲ್ಪಿತ ಆರಾಧನೆಯು ದೋಷಯುಕ್ತವಾದುದು. ಪೂರ್ವ ಮಹಾಪುರುಷರು ಹಾಗೂ ತತ್ತ್ವವಿದರಾದ ಋಷಿಗಳು ಪರಮೇಶ್ವರನ ಪ್ರಸನ್ನತೆಯ ಸಾಧನೆ ಗಾಗಿ ಶಾಸ್ತ್ರಗಳಲ್ಲಿ ನಿರ್ದೇಶಿಸಿದ ವಿಧಾನಗಳು ನಿರ್ದೋಷವಾದವುಗಳಾಗಿದ್ದು, ಅವುಗಳನ್ನು ಕರ್ತವ್ಯಬುದ್ಧಿಯಿಂದ ಅನುಸರಿಸುವುದರ ಮೂಲಕ ವಾಗಿಯೇ ಸಾಧಾರಣ ಮಾನವರು ಯಥಾರ್ಥ ವಾಗಿ ಈಶ್ವರಾರಾಧನೆಯನ್ನು ಗೈಯಬಲ್ಲರು. ಕರ್ತವ್ಯ ಬುದ್ಧಿಯಿಂದ ಕೂಡಿದ ಆರಾಧನೆಯಲ್ಲಿ

ವಿಧಿಯ ಸಮ್ಯಾನ ಹಾಗೂ ಅವಿಧಿಯ ಪರಿತ್ಯಾಗ- ಈ ಎರಡು ವಿಚಾರಗಳು ಉದ್ಭವಿಸುತ್ತವೆ. ಅದು ದರಿಂದ ಈ ಉಪಾಸನೆಯನ್ನು ವಿಧಿಮಾರ್ಗದ ಉಪಾಸನೆ ಅಥವಾ ವೈಧೀ ಉಪಾಸನೆಯೆಂದು ಕರೆಯುವರು.

ವಿಭಿನ್ನ ದೇಶಗಳಲ್ಲಿ ವಾಸಿಸುವ ಮಾನವರ ಗೌಣ ಪ್ರಕೃತಿಗಳು ಬೇರೆ ಬೇರೆಯಾದುದಾದರೂ ಸಮಸ್ತ ಮಾನವರ ಮುಖ್ಯ ಪ್ರಕೃತಿಯು ಒಂದೇ ವಿಧವಾದುದಾಗಿದೆ. ಪರಮೇಶ್ವರನ ಸೃಷ್ಟಿಯ ವೈವಿಧ್ಯದ ಕಾರಣವಾಗಿ ಒಂದೇ ರೀತಿಯ ಗೌಣ ಪ್ರಕೃತಿಯುಳ್ಳ ಇಬ್ಬರು ಮನುಷ್ಯರನ್ನು ಜಗತ್ತಿನಲ್ಲಿ ಎಲ್ಲಿಯೂ ಕಾಣಲಾಗುವುದಿಲ್ಲ. ಒಂದೇ ಗರ್ಭ ದಲ್ಲಿ ಜನಿಸಿದ ಸಹೋದರರು ಕೂಡ ವಿಭಿನ್ನ ಪ್ರಕೃತಿಯವರಾಗಿ ಇರುವುದರಿಂದ ಸರ್ವವಿಧ ವಾಗಿ ಏಕರೀತಿಯಿಂದ ಕೂಡಿದ ಮಾನವರನ್ನು ಎಂದಿಗೂ ಎಲ್ಲಿಯೂ ಕಾಣಲಾಗುವುದಿಲ್ಲ. ವಿಭಿನ್ನ ದೇಶಗಳ ಜಲ, ವಾಯು, ಪರ್ವತ, ವನ, ನದಿ ಇತ್ಯಾದಿಗಳ ಸನ್ನಿವೇಶ, ಖಾದ್ಯದ್ರವ್ಯ, ಉಡುಪುತೊಡವು ಇತ್ಯಾದಿಗಳು ನೈಸರ್ಗಿಕವಾಗಿ ಪರಸ್ಪರ ಭಿನ್ನವಾದವುಗಳಾಗಿರುತ್ತವೆ. ಇದ ರಿಂದಾಗಿ ಮಾನವರ ಮಾನಸಿಕ ಭಾವಗಳೂ ಅನುರೂಪವಾಗಿ ವಿಭಿನ್ನವಾಗಿರುತ್ತವೆ. ಈ ವಿಭಿನ್ನ ಭಾವನೆಗಳಿಂದ ಕೂಡಿದ ಮಾನವರ ಈಶ್ವರಭಾವವು ಮುಖ್ಯಾಂಶದಲ್ಲಿ ಒಂದೇ ರೀತಿಯದಾಗಿದ್ದರೂ ಗೌಣಾಂಶದಲ್ಲಿ ವಿಭಿನ್ನ ವಾದುದಾಗಿರುತ್ತದೆ. ಈ ಕಾರಣದಿಂದ ದೇಶ ವಿದೇಶಗಳ ಮಾನವರು ಅಸಭ್ಯ ಅವಸ್ಥೆಯಿಂದ ಉನ್ನತಿಯನ್ನು ಗಳಿಸಿ ಕ್ರಮವಾಗಿ ಸಭ್ಯಅವಸ್ಥೆ, ವೈಜ್ಞಾನಿಕ ಅವಸ್ಥೆ, ನೈತಿಕ ಅವಸ್ಥೆ ಹಾಗೂ ಭಕ್ತ್ಯಾವಸ್ಥೆಗಳನ್ನು ಸಾಧಿಸುವ ಸಮಯದಲ್ಲಿ ಈಶ್ವರ ಭಜನಪ್ರಣಾಲಿಯೂ ಭಾಷಾಭೇದ, ಆಚಾರ್ಯಭೇದ, ಕ್ರಿಯಾಭೇದ, ಭಾವಭೇದ ಇತ್ಯಾದಿಗಳಿಂದ ವಿಭಿನ್ನ ರೂಪಗಳನ್ನು ಗಳಿಸುತ್ತದೆ. ನಿರಪೇಕ್ಷವಾಗಿ ವಿಚಾರಿಸಿದಲ್ಲಿ ತಿಳಿಯ ಬಹುದೇನೆಂದರೆ, ಗೌಣಭೇದಗಳಿಂದ ಯಾವವಿಧ ವಾದ ಪಾರಮಾರ್ಥಿಕ ನ್ಯೂನತೆಯೂ ಒದಗಲಾರದು. ಮುಖ್ಯ ಭಾವಗಳಲ್ಲಿ ಐಕ್ಯವಿದ್ದಲ್ಲಿ ಆರಾಧನೆಯ ಫಲವು ಒಂದೇ ವಿಧವಾಗಿ ದೊರೆಯುವುದು. ಈ ಕಾರಣವಾಗಿ ಪರಮೇಶ್ವರನನ್ನು ಯಾವುದಾದರೊಂದು ವಿಧದಲ್ಲಿ ಪೂಜಿಸುವವರು ಇತರ ರೀತಿಯ ಉಪಾಸಕರಲ್ಲಿ ಯಾವರೀತಿಯ ಹಿಂಸೆ, ವಿದ್ವೇಷ, ನಿಂದೆ ಇತ್ಯಾದಿಗಳನ್ನು ಮಾಡ ಬಾರದು. ಹಿಂಸೆ, ಅಸೂಯೆಗಳು ಕೇವಲ ಕುಸಂಸ್ಕಾರಗಳ ಫಲವಾಗಿದೆ.

ಪರಮೇಶ್ವರನಲ್ಲಿಯೂ, ಪರಮೇಶ್ವರನ ವೈವಿಧ್ಯಪೂರ್ಣವಾದ ಸೃಷ್ಟಿಯಲ್ಲಿಯೂ ಪ್ರೀತಿಯನ್ನು ಹೊಂದದಿರುವ ಅಸಾರಗ್ರಾಹಿಗಳೇ ವ್ಯಥಾವಿವಾದಗಳನ್ನು ಆದರಿಸುವರು. ಈ ವಿಷಯದಲ್ಲಿ, ಸಾರ ಗ್ರಾಹಿಗಳಾದವರು ತಿಳಿಯಬೇಕಾದುದೇನೆಂದರೆ, ವಿಭಿನ್ನರೀತಿಯ ಭಜನ ಪ್ರಣಾಲಿಗಳನ್ನು ನಿಂದಿಸ ಬಾರದಾದರೂ, ಯಾರಲ್ಲಿಯಾದರೂ ಪ್ರಕೃತ ವಾಗಿ ದೋಷಗಳು ಕಂಡುಬಂದಲ್ಲಿ ಅವುಗಳನ್ನು ನಿಶ್ಚಯವಾಗಿಯೂ ಆದರಿಸಲಾಗುವುದಿಲ್ಲ. ಪಾರ ಮಾರ್ಥಿಕ ದೋಷಗಳನ್ನು ಯತ್ನಪೂರ್ವಕವಾಗಿ ಸದುಪಾಯಗಳಿಂದ ಹೋಗಲಾಡಿಸಿದಲ್ಲಿ ಅದು ಮಾನವರ ವಿಶೇಷ ಕಲ್ಯಾಣದ ಕಾರಣ ವಾಗುವುದು. ನಾಸ್ತಿಕ, ಜಡವಾದಿ, ನಿರ್ವಿಶೇಷ ವಾದಿ, ಸಂದೇಹವಾದಿ ಮೊದಲಾದವರನ್ನು ಅನುಗ್ರಹಪೂರ್ವಕವಾಗಿ ಸತ್ಪಥಕ್ಕೆ ಒಯ್ಯುವುದು ಪವಿತ್ರವಾದ ಧಾರ್ಮಿಕ ಕೃತ್ಯವಾಗಿದೆ. ಸಮಸ್ತ ವಿಶ್ವಬ್ರಹ್ಮಾಂಡಗಳ ಪ್ರಭುವಾದ ಪರಮೇಶ್ವರನು ಒಂದೇ ಪರತತ್ತ್ವವಾಗಿರುವುದರಿಂದ ಪರಮೇಶ್ವರನ ಉಪಾಸಕರು ಯಾವ ದೇಶದಲ್ಲಿ ಅವಸ್ಥಿತ ವಾಗಿದ್ದರೂ ಕೂಡ ಉಪಾಸನೆಯ ಹೇತುಗಳು ಕೇವಲವಾಗಿ ಮೊದಲು ಉಲ್ಲೇಖಿಸಿದಂತೆ ನಾಲ್ಕು ವಿಧವಾದವು. ಕರ್ತವ್ಯ ಬುದ್ಧಿಯಿಂದ ಭಜನೆಯನ್ನು ಗೈಯುವವರು ಈಶ್ವರನನ್ನು ಜಗತ್ತಿನ ಪಿತನೆಂದೂ, ಪಾಲಕನೆಂದೂ, ರಕ್ಷಕನೆಂದೂ ತಿಳಿದು ಸೇವಿಸುವರು. ಮಾನವರ ಸುವ್ಯವಸ್ಥಿತ ವಾದ ಜೀವನದ ಸಲುವಾಗಿ ದಯಾಮಯನಾದ ಪರಮೇಶ್ವರನು ಪಂಚಭೂತಗಳಿಂದ ಕೂಡಿದ ಭೌಮ ಜಗತ್ತನ್ನೂ, ಕಾಲವಿಭಾಗದ ಮೂಲಕ ವಾಗಿ ರಾತ್ರಿ ಹಗಲುಗಳನ್ನೂ, ತಿಥಿ- ಮಾಸ - ಸಂವತ್ಸರಗಳನ್ನೂ, ಋತುಗಳ ನಿಯಮಗಳನ್ನೂ, ಖಾದ್ಯಸಾಮಗ್ರಿಗಳನ್ನೂ, ಓಷಧಿ - ಮೂಲಿಕೆ ಗಳನ್ನೂ, ಕರ್ಮೇಂದ್ರಿಯ - ಜ್ಞಾನೇಂದ್ರಿಯ - ಮನಸ್ಸು-ತನ್ಮಾತ್ರ ಇತ್ಯಾದಿಗಳನ್ನೂ, ಕಾರ್ಯ ಕ್ಷಮವಾದ ಭೌತಿಕ ಶರೀರಗಳನ್ನೂ, ಜಾಗತಿಕ ಅಭಾವಗಳನ್ನು ಹೋಗಲಾಡಿಸುವ ಸಲುವಾಗಿ ಬುದ್ಧಿಶಕ್ತಿಯನ್ನೂ, ಇತ್ಯಾದಿಯಾಗಿ ಅಸಂಖ್ಯ ಅದ್ಭುತವಾದ ವ್ಯವಸ್ಥೆಗಳನ್ನೂ, ಕಾರ್ಯಕೌಶಲ ಗಳನ್ನೂ ಸೃಷ್ಟಿಸಿರುವನು. ಇದರ ಪ್ರತಿಯಾಗಿ ಭಗವಂತನನ್ನು ಕೃತಜ್ಞತಾಪೂರ್ವಕವಾಗಿ ಕೊಂಡಾಡಿ ಪೂಜಿಸುವುದೇ ಕರ್ತವ್ಯ ಬುದ್ಧಿಯ ಮೂಲಕವಾದ ಉಪಾಸನೆಯಾಗಿದೆ. ತೃತೀಯ ವಿಧವಾದ ಈ ಉಪಾಸನೆಯು ಮೊದಲಿನ ಎರಡು ವಿಧ ಉಪಾಸನೆಗಳಿಗಿಂತ ಶ್ರೇಷ್ಠವಾದುದಾದರೂ ಇದು ಕೂಡ ಪರಮೇಶ್ವರನ ಪೂರ್ಣಪ್ರಸನ್ನತೆ ಯನ್ನು ಗಳಿಸಲು ಅಸಮರ್ಥವಾದುದಾಗಿದೆ. ಕರ್ತವ್ಯಭಾವದ ಉಪಾಸಕನು, ಪರಮೇಶ್ವರನು ಜೀವರ ಪ್ರತಿಯಾಗಿ ಗೈದ ಅನಂತ ಉಪಕಾರಗಳ ಪ್ರತಿಯಾಗಿ ಮಾತ್ರವೇ ತನ್ನ ಕೃತಜ್ಞತೆಯನ್ನು ಸಲ್ಲಿಸುತ್ತಾನೆ. ಪರಮೇಶ್ವರನು ನಾನಾವಿಧವಾದ ಉಪಕಾರಗಳನ್ನು ಗೈಯದಿದ್ದಲ್ಲಿ ಈ ತರದ ಉಪಾಸಕರು ಈಶ್ವರೋಪಾಸನೆಯನ್ನು ಮಾಡು ತ್ತಿರಲಿಲ್ಲ.

ಹೇತುಮೂಲಕವಾದ ಉಪಾಸನೆಯು ಅಶುದ್ಧ ವಾದುದು. ನಿರ್ಮಲವಾದ ಅನುರಾಗದಿಂದ ಕೂಡಿ ಈಶ್ವರಭಜನೆಯನ್ನು ಮಾಡುವವರೇ ಯಥಾರ್ಥವಾದ ಸಾಧಕರು. ಭಗವಂತನ ಹಾಗೂ ಜೀವಾತ್ಮನ ನಿತ್ಯಬಂಧನಸೂತ್ರವಾದ ಈ ಪ್ರೇಮಮಯ ಅನುರಾಗವು ಹೇತು ವಿಹೀನವೂ, ನಿರವಚ್ಛಿನ್ನವೂ ಆಗಿದ್ದು ಅಹೈತುಕೀ ಹಾಗೂ ಅಪ್ರತಿಹತಾ ಎಂದು ಕರೆಯಲ್ಪಡುವುದು. ಪರಮೇಶ್ವರನೊಡನೆ ಜೀವಾತ್ಮನ ನಿಗೂಢವಾದ ಸಂಬಂಧವೊಂದಿದೆ. ಜೀವಾತ್ಮನಲ್ಲಿ ಭಗವದನು ರಾಗದ ಉದಯವಾದಲ್ಲಿ ಈ ಸಂಬಂಧವು ಪ್ರಸ್ಫುಟಿತವಾಗುವುದು. ಜೀವೇಶ್ವರರೊಳಗಿನ ಈ ಸಂಬಂಧವು ನಿತ್ಯವಾದುದಾದರೂ ಜಡಬದ್ಧ ಜೀವ ರಲ್ಲಿ ಇದು ಗುಪ್ತವಾಗಿರುತ್ತದೆ. ಸುಯೋಗ್ಯ ಸನ್ನಿವೇಶವು ಒದಗಿದಲ್ಲಿ ಈ ಸಂಬಂಧವು ಪ್ರಕಾಶಿತವಾಗುತ್ತದೆ. ಬೆಂಕಿಯ ಕಡ್ಡಿ ಅಥವಾ ಚಕಮುಕಿ ಕಲ್ಲನ್ನು ಘರ್ಷಿಸಿದಲ್ಲಿ ಅಗ್ನಿಯು ಉತ್ಪನ್ನ ವಾಗುವಂತೆ ಭಕ್ತಿಮಾರ್ಗದ ಸಾಧನೆಯಿಂದ ಈ ಸಂಬಂಧವು ಉಜ್ವಲತೆಯನ್ನು ಗಳಿಸುವುದು. ಭಯ, ಆಸೆ ಹಾಗೂ ಕರ್ತವ್ಯಬುದ್ಧಿಗಳಿಂದ ಭಗ ವದ್ಭಜನೆಯನ್ನು ಮಾಡುವ ಸಮಯದಲ್ಲಿ ಅನೇಕ ರಲ್ಲಿ ಈ ಪರಮಾರ್ಥಿಕ ಸಂಬಂಧವು ಪ್ರಕಾಶಿತ ವಾಗಿದೆ. ಉದಾಹರಣೆಗಾಗಿ, ರಾಜಪುತ್ರ ನಾದ ಧ್ರುವನು ಮೊದಲು ರಾಜ್ಯಪ್ರಾಪ್ತಿಯ ಸಲುವಾಗಿ ಹರಿಭಜನವನ್ನು ಗೈದಿದ್ದನು, ಆದರೆ ನಿಷ್ಕಪಟಸಾಧನೆಯ ಫಲವಾಗಿ ಆತನ ಹೃದಯ ದಲ್ಲಿ ಭಗವದನುರಾಗರೂಪವಾದ ಸಂಬಂಧದ ಉದಯವಾದುದರಿಂದ ಜಾಗತಿಕ ಆಸಕ್ತಿಗಳು ತೊಲಗಿದವು.

ಸಚ್ಚಿದಾನಂದ ವಿಗ್ರಹಸ್ವರೂಪನಾದ ಭಗವಂತ ನಲ್ಲಿ ವಿಮಲ ಪ್ರೇಮವೇ ಜೀವಾತ್ಮನ ನಿತ್ಯಧರ್ಮ ವಾಗಿದೆ. ನಿರ್ಮಲ ಭಗವತ್ ಪ್ರೇಮವು ಯಾವ ಧರ್ಮದಲ್ಲಿ ಶ್ರೇಷ್ಠಸ್ಥಾನವನ್ನು ಗಳಿಸಿರುವುದೋ ಆ ಧರ್ಮವೇ ಯಥಾರ್ಥಧರ್ಮವಾದ ಧರ್ಮವಾಗಿದೆ. ಭಗವತ್‌ಪ್ರೇಮಕ್ಕೆ ವಿರುದ್ಧವಾದ ಮತವಾದ ಗಳನ್ನೆಲ್ಲ ನಿಶ್ಚಯವಾಗಿಯೂ ಅಧರ್ಮಗಳೆಂದು ತಿಳಿಯಬೇಕು. ಕೃಷ್ಣಪ್ರೇಮವೇ ನಿರ್ಮಲವಾದ ಭಗವತ್‌ಪ್ರೇಮವಾಗಿದೆ. ಪ್ರೇಮದ ಸ್ವಭಾವ ವೇನೆಂದರೆ ಅದು ಯಾವುದಾದರೊಂದು ತತ್ತ್ವ ವನ್ನು ಆಶ್ರಯಿಸಿರುತ್ತದೆ ಹಾಗೂ ಯಾವು ದಾದರೂ ಇನ್ನೊಂದು ತತ್ತ್ವವನ್ನು ತನ್ನ ವಿಷಯಸ್ವರೂಪವಾಗಿ ಸ್ವೀಕರಿಸುತ್ತದೆ. ವಿಷಯ ತತ್ತ್ವ ಹಾಗೂ ಆಶ್ರಯತತ್ತ್ವಗಳ ಸಂಬಂಧದ

ಪರಿಚಯುವನ್ನೇ ಪ್ರೇಮವೆಂದು ತಿಳಿಯಬೇಕು. ನಿರ್ಮಲವಾದ ಜೀವ ಹೃದಯವು ಶುದ್ಧಪ್ರೇಮದ ಆಶ್ರಯವಾಗಿದ್ದು ಏಕಮಾತ್ರವಾಗಿ ಶ್ರೀಕೃಷ್ಣನೇ ಪ್ರೇಮದ ವಿಷಯವಾಗಿರುವನು. ಪೂರ್ಣವಾದ ವಿಮಲಪ್ರೇಮವು ಹೃದಯದಲ್ಲಿ ಉದಿತವಾದಲ್ಲಿ ಉಪಾಸ್ಯವಸ್ತುವಿನ ಬ್ರಹ್ಮತ್ವ, ಈಶ್ವರತ್ವ ಹಾಗೂ ನಾರಾಯಣತ್ವಗಳು ಪೂರ್ಣ ಮಾಧುರ್ಯ ಸ್ವರೂಪನಾದ ಶ್ರೀಕೃಷ್ಣನ ಸ್ವರೂಪದಲ್ಲಿ ಪರ್ಯವಸಿತವಾಗುವುದು. ಸಾಧುಸಂಗದಲ್ಲಿ ಈ ನಿರ್ಮಲ ಪ್ರೇಮದ ವಿಷಯವಾಗಿ ನಿರಂತರ ಆಲೋಚನೆಯನ್ನು ಗೈಯುತ್ತಿದ್ದಲ್ಲಿ ಇದರ ಅನುಭವವು ದೊರಕುವುದು.

ಪರಮೇಶ್ವರನೂ, ಪರತತ್ತ್ವಸ್ವರೂಪನೂ ಆಗಿರುವ ಶ್ರೀಕೃಷ್ಣನು ಕೃಷ್ಣನಾಮದೊಡನೆ ಅಭಿನ್ನನಾಗಿರುವುದರಿಂದ ಭಕ್ತರು ಪ್ರೀತಿಯಿಂದ ಕೃಷ್ಣನಾಮಗಳನ್ನು ನಿರಂತರವಾಗಿ ಉಚ್ಚರಿಸುತ್ತ ಭಗವಂತನ ಅನುಗ್ರಹದಿಂದ ಭಗವಂತನ ರೂಪ, ಗುಣ, ಲೀಲೆ, ಪರಿಕರ ಇತ್ಯಾದಿಗಳನ್ನು ತಮ್ಮ ಹೃದಯದಲ್ಲಿ ದರ್ಶಿಸುವರು ಹಾಗೂ ಪ್ರೇಮ ನೇತ್ರಗಳಿಂದ ಇವುಗಳನ್ನು ಸರ್ವತ್ರವಾಗಿ ಕಾಣುವರು. ಇದು ಭಗವಂತನ ಅಚಿಂತ್ಯವಾದ ಪರಾಶಕ್ತಿಯ ಪ್ರಭಾವವಾಗಿದೆ. ಸರ್ವಶಾಸ್ತ್ರ ಶಿರೋಮಣಿ ಶ್ರೀಮದ್ಭಾಗವತದಲ್ಲಿ ವರ್ಣಿತ ವಾಗಿರುವ ಶ್ರೀಕೃಷ್ಣ ಚರಿತಾಮೃತವು ಶ್ರೀ ವ್ಯಾಸ ದೇವರು ಸಾಕ್ಷಾತ್ತಾಗಿ ಭಕ್ತಿ ಸಮಾಧಿಯ ಮೂಲಕವಾಗಿ ದರ್ಶನಗೈದ ತತ್ತ್ವ ವಾಗಿದೆ. ಶ್ರೀ ನಾರದರ ಉಪದೇಶದಿಂದ ವೇದ ವ್ಯಾಸರು ಭಕ್ತಿರೂಪದ ಸಹಜ ಸಮಾಧಿಯೋಗ ವನ್ನು ಅವಲಂಬಿಸಿ ಸ್ವಯಂ-ಭಗವಂತನಾದ ಶ್ರೀಕೃಷ್ಣನ ಸ್ವರೂಪವನ್ನೂ, ಭಗವಂತನ ಅಪಾಶ್ರಿತ ವಾದ ಮಹಾಮಾಯೆಯನ್ನೂ, ತ್ರಿಗುಣಯುಕ್ತ ವಾದ ಮಾಯೆಯಿಂದ ಮೋಹಗ್ರಸ್ತರಾದ ಬದ್ಧ ಜೀವರನ್ನೂ ದರ್ಶಿಸಿದರು. ಅನರ್ಥಗ್ರಸ್ತರಾದ ಈ ಬದ್ಧಜೀವರ ಉದ್ಧಾರಕ್ಕಾಗಿ ವೇದವ್ಯಾಸರು ಪರಮಪುರುಷನಾದ ಶ್ರೀಕೃಷ್ಣನಲ್ಲಿ, ಸರ್ವವಿಧ ವಾದ ಶೋಕ, ಮೋಹ, ಭಯಗಳನ್ನು ನಾಶ ಗೊಳಿಸುವ ನಿರ್ಮಲಭಕ್ತಿಯು (ಪ್ರೇಮದ) ಉದಯವಾಗುವ ಸಲುವಾಗಿ ಭಗವಂತನ ಅಪ್ರಾಕೃತ ಚರಿತಾಮೃತವನ್ನು ಶ್ರದ್ಧಾಪೂರ್ವಕ ವಾಗಿ ವಿದ್ಯಾಶಕ್ತಿಯ ಭಕ್ತಿವೃತ್ತಿಯ ಆಶ್ರಯದಲ್ಲಿ ನಿತ್ಯವಾಗಿ ಸೇವಿಸಿದಲ್ಲಿ ಪೂರ್ಣಾನಂದ ಸ್ವರೂಪ ವಾದ ಕೃಷ್ಣಪ್ರೇಮವು ಭಕ್ತರ ಹೃದಯಗಳನ್ನು ಬೆಳಗಿಸುವುದು. ಶ್ರೀಕೃಷ್ಣನಲ್ಲಿ ಪ್ರೇಮಭಕ್ತಿಯ ಶ್ರೇಷ್ಠತೆಯನ್ನು ಶ್ರೀ ಬಿಲ್ವಮಂಗಲರ ನಿಮ್ನಲಿಖಿತ ಸ್ತೋತ್ರದಲ್ಲಿ ಕಾಣಬಹುದು.

ಭಕ್ತಿಸ್ತ್ವಯೀ ಸ್ಥಿರತರಾ
ಭಗವನ್ ಯದಿಸ್ಯಾದ್
ದೈವೇನ ನಃ ಫಲತಿ
ದಿವ್ಯಕಿಶೋರ ಮೂರ್ತಿಃ ।
ಮುಕ್ತಿಃ ಸ್ವಯಂ ಮುಕುಲಿ
ತಾಂಜಲಿ ಸೇವತೇಽಸ್ಮಾನ್
ಧರ್ಮಾರ್ಥಕಾಮಗತಯಃ ಸಮಯ-
ಪ್ರತೀಕ್ಷಾ ॥
—ಶ್ರೀಕೃಷ್ಣಕರ್ಣಾಮೃತ.

ಹೇ ಭಗವಾನ್, ನಿನ್ನ ಪ್ರತಿಯಾಗಿ ನಮ್ಮಲ್ಲಿ ಸ್ಥಿರತರವಾದ ಪ್ರೇಮಭಕ್ತಿಯು ಅವಸ್ಥಿತವಾಗಿದ್ದಲ್ಲಿ ನಿನ್ನ ದಿವ್ಯವೂ ಅಲೌಕಿಕವೂ ಆದ ನಿತ್ಯಕಿಶೋರ ಮೂರ್ತಿಯು ನಮ್ಮ ಸಮ್ಮುಖದಲ್ಲಿ ಸ್ಪಷ್ಟವಾಗಿ ಉದಿತವಾಗುವುದು. ಮುಕ್ತಿದೇವಿಯು ಸ್ವಯಂ ಅಂಜಲೀಬದ್ಧಳಾಗಿ ನಮ್ಮ ಬಂಧವಿಮೋಚನೆ ಯನ್ನು ಗೈದು ನಮ್ಮನ್ನು ಸೇವಿಸುವಳು. ಧರ್ಮಾರ್ಥಕಾಮರೂಪವಾದ ತ್ರಿವರ್ಗವು ನಮ್ಮ ಸೇವೆಯನ್ನು ಲಾಭಗಳಿಸುವ ಸಲುವಾಗಿ ಸಮಯ ಪ್ರತೀಕ್ಷೆಯನ್ನು ಮಾಡುತ್ತಿರುವುದು.

ಶ್ರೀಕೃಷ್ಣನಲ್ಲಿ ಪ್ರೇಮ ಭಕ್ತಿಯೇ ಸಮಸ್ತ ಜೀವಾತ್ಮರ ಶ್ರೇಷ್ಠವಾದ ನಿತ್ಯಸಂಪತ್ತಿಯಾಗಿದೆ. ಇದನ್ನು ಲಾಭಗಳಿಸುವ ಸಲುವಾಗಿ ನರಜೀವನ ವನ್ನು ಸದುಪಯೋಗಗಳಿಸುವುದು ಪ್ರತಿಯೊಬ್ಬ ಮಾನವನ ಅತ್ಯಾವಶ್ಯಕವಾದ ಕರ್ತವ್ಯವಾಗಿದೆ.

---



ಈಚೆಗೆ ತಿರುಪತಿಯಲ್ಲಿ ಹಿಂದೂ ಧರ್ಮ ರಕ್ಷಣ ಸಂಸ್ಥೆಯವರು ಸ್ವಾಮಿ ಚಿನ್ಮಯಾನಂದ ಮಿಷನ್ ಸಹಯೋಗದಿಂದ ನಡೆಸಿದ ಹಿಂದೂ ಧರ್ಮ ಶಿಕ್ಷಣ ಶಿಬಿರಕ್ಕೆ ಸ್ವಾಮಿ ಚಿನ್ಮಯಾನಂದರು ಆಗಮಿಸಿದಾಗ ತೆಗೆದ ಚಿತ್ರಗಳು. ಮೇಲೆ ಸ್ವಾಮೀಗಳಿಗೆ ಪೂರ್ಣ ಕುಂಭ ಸ್ವಾಗತ. ಕೆಳಗಡೆ ಸ್ವಾಮಿಗಳ ಅನುಗ್ರಹ ಭಾಷಣ. ಚಿತ್ರಗಳಲ್ಲಿ ಸ್ವಾಮಿನಿ ಶಾರದಾ ಪ್ರಿಯಾನಂದ, ಶ್ರೀ ಪಿ.ವಿ.ಆರ್.ಕೆ. ಪ್ರಸಾದ್‌ರನ್ನೂ ಕಾಣಬಹುದು.

( 19 ನೇ ಪುಟದಿಂದ )

ಮೇಲಿನ ಹಕ್ಕಿಯ ಪ್ರತಿಬಿಂಬದಂತೆಯೂ, ಛಾಯೆ ಯಂತೆಯೂ ಗೋಚರಿಸುತ್ತಿತ್ತು. 'ಏಕಂ ಸತ್' ನಿಜವಾದುದೂ, ಶಾಶ್ವತವಾದುದೂ ಮೇಲಿನ ಹಕ್ಕಿ ಮಾತ್ರವೇ.

ಇಷ್ಟೇ ಸುಂದರ ನಿದರ್ಶನವಾಗಿ, ಗೋಲೋಕ ದಲ್ಲಿ ಶ್ರೀಹರಿಯೊಂದಿಗಿದ್ದು, ಭೂಲೋಕಕ್ಕೆಬಂದು, ಹರಿಯನ್ನೇ ಬಯಸಿ, ಅವನಿಗಾಗಿಯೇ ತಪಿಸಿ, ಅವನ ಸಂಕಲ್ಪದಂತೆ ನಡೆದು ಅವನನ್ನೇ 'ಸೇರಿದ ಈ ಮಂಗಳದ ಕಥೆ,

ಶಿರೋಧಾರ್ಯಾಚ ಸರ್ವೇಷಾಂ
ಈಪ್ಸಿತಾ ವಿಶ್ವಪಾವನೀ
ಜೀವನ್ಮುಕ್ತಾ ಮುಕ್ತಿದಾಂಚ
ಭಜೇತಾಂ ಹರಿಭಕ್ತಿದಾಂ

ಸಕಲರಿಗೂ ಶಿರೋಧಾರ್ಯಳೂ, ಪ್ರೀತಿಪಾತ್ರಳೂ, ವಿಶ್ವಪಾವನಳೂ, ಜೀವನ್ಮುಕ್ತಳೂ, ಮುಕ್ತಿದಾ ಯಕಳೂ, ಹರಿಭಕ್ತಿದಾಯಕಳೂ ಆದ ಶ್ರೀ ತುಲ ಸಮನನ್ನು ಭಜಿಸುವ.

---

# ಮೈಸೂರರಸರ ಕಾಲದಲ್ಲಿ

# ಸಂಗೀತ ಪ್ರಪಂಚ



ತಾಳಿಕೋಟೆಯ ಯುದ್ಧಾನಂತರ ವಿಜಯ ನಗರದ ಸಾಮ್ರಾಜ್ಯವು ಛಿದ್ರ ಛಿದ್ರವಾಗಿ ಒಡೆಯಿತು. ಕಲಾ ಸಾಹಿತ್ಯಗಳಿಗೆ ಆ ಸಾಮ್ರಾಜ್ಯವು ನೀಡುತ್ತಿದ್ದ ರಾಜಾಶ್ರಯ ಸಂಪ್ರದಾಯವು ಆ ರಾಜ್ಯವು ಪತನವಾದ ಮೇಲೆ ಮೈಸೂರು, ತಂಜಾವೂರು, ತಿರುವನಂತಪುರ ಮೊದಲಾದ ಆಶ್ರಿತ ಸಂಸ್ಥಾನಗಳಲ್ಲಿ ಇತೋಪ್ಯತಿಶಯವಾಗಿ ಬೆಳೆದು ಬಂದಿತು. ಅನೇಕ ಶತಮಾನಗಳಕಾಲ ಈ ರಾಜರ ಉಚ್ಚಸಂಸ್ಕೃತಿ, ದೂರದೃಷ್ಟಿ, ಕಲಾ ಸಾಹಿತ್ಯಗಳ ಅಭಿಮಾನ, ಸೌಂದರ್ಯೋಪಾಸನೆ ಇವು ರಾಜ್ಯದ ದೃಷ್ಟಿಯಿಂದ ಬಹು ಫಲಕಾರಿಯಾದವು. ಪ್ರತಿಭಾವಂತರೂ ಕಾರ್ಯದಕ್ಷರೂ ರಾಜಕಾರಣಿಗಳೂ ಆದ ಈ ರಾಜರು ತಮ್ಮ ಪ್ರಜೆಗಳ ವಿಷಯದಲ್ಲಿಯೇ ಅಲ್ಲದೆ ಅವರ ಜೀವನದ ಆದರ್ಶದಲ್ಲಿಯೂ ವಿಶೇಷ ಆಸಕ್ತರಾಗಿದ್ದರು. ಅವರು ಸಂಗೀತ ದೃಷ್ಟಿಯಿಂದ ಕರ್ನಾಟಕವನ್ನು ಭರತ ಖಂಡದ ನಕ್ಷೆಯಲ್ಲಿ ಅತ್ಯುಜ್ವಲವಾಗಿ ಚಿತ್ರಿಸಿದರು. ಈ ರಾಜ್ಯಗಳು ಸಂಗೀತ ಮತ್ತು ಭರತ ನಾಟ್ಯಗಳ ಕೇಂದ್ರವಾದವು. ಅವರ ಪ್ರೋತ್ಸಾಹ, ಆಶ್ರಯ ಸ್ವಪರಿಶ್ರಮದ ವಿಷಯವಾಗಿ ಸಂಪುಟಗಳನ್ನೇ ರಚಿಸಬಹುದು. ಆದರೆ ಇಲ್ಲಿ ಸಂಗೀತ ಪ್ರಪಂಚದಲ್ಲಿ ಮೈಸೂರರಸರಲ್ಲಿ ಒಬ್ಬೊಬ್ಬರ ಕೊಡುಗೆ ಮತ್ತು ಸ್ಥಾನಗಳನ್ನು ಬಹು ಸಂಗ್ರಹವಾಗಿ ನಿರೂಪಿಸಲು ಪ್ರಯತ್ನಿಸಿದೆ. ಅದರಲ್ಲಿಯೂ ಆ ವಿಷಯವನ್ನು ಮೈಸೂರಿಗೆ ಮಾತ್ರ ಸೀಮಿತಗೊಳಿಸಿದೆ.

ಮೈಸೂರರಸರಲ್ಲಿ ರಾಜ ಒಡೆಯರು (1617–1637) ಶ್ರೀರಂಗಪಟ್ಟಣದಲ್ಲಿ ವಿಜಯನಗರದ ಉತ್ತರಾಧಿಕಾರಿಗಳಾಗಿ ಸಿಂಹಾಸನಾರೂಢರಾಗಿ ಹಿಂದಿನಿಂದ ನಡೆದು ಬರುತ್ತಿದ್ದ ದಸರಾ ಮಹೋತ್ಸವವನ್ನು ವ್ಯವಸ್ಥೆಗೊಳಿಸಿ ಸಂಪ್ರದಾಯಾನುಸಾರವಾಗಿ ಮುಂದುವರಿಸಿದರು. ಅವರ ಉತ್ತರಾಧಿಕಾರಿಯಾದ 6ನೆಯ ಚಾಮರಾಜ ಒಡೆಯರು ಸ್ವಯಂಕಲಾವಿದರೂ ಸಂಗೀತ ಪ್ರಿಯರೂ ಆಗಿದ್ದುದಲ್ಲದೆ ಚತುಷ್ಷಷ್ಟಿ ಕಲೆಗಳಲ್ಲಿ ಪ್ರವೀಣರಾಗಿ "ವೀಣೆದಳೆದು ಬಣ್ಣ ವಾದ್ಯಂಗಳಂ ಬಾಜಿಪೋಜೆಯಿಂದ ಕೂಡಿ ಕಾವ್ಯ ನಾಟಕಾಲಂಕಾರ ಸಾರಸರ್ವಸ್ವ ರಸಾಸ್ವಾದಿ"ಗಳಾಗಿದ್ದರು. ಇವರು ವೀಣಾವಾದನ ಸಂಗೀತ ಕಾವ್ಯನಾಟಕಾದಿ ಸಕಲ ಶಾಸ್ತ್ರಗಳನ್ನೂ ವಿದ್ಯುಕ್ತವಾಗಿ ಅಧ್ಯಯನ ಮಾಡಿದ್ದರು. ಇವರ ನಿತ್ಯದೋಲಗದಲ್ಲಿ ಸಭಾಸದರ ಸಂತೋಷಾರ್ಥವಾಗಿ, ನಾಟ್ಯ, ವೀಣಾ ತಂಬೂರಾದಿ ಕಾರ್ಯಕ್ರಮಗಳು ನಡೆಯುತ್ತಿದ್ದವು.

ಡಾ॥ ಎನ್. ಅನಂತರಂಗಾಚಾರ್

ಮುಂದಿನ ಕಂಠೀರವ ನರಸಿಂಹರಾಜ ಒಡೆಯರು ರಾಜ್ಯ ವಿಸ್ತರಣೆಯಲ್ಲಿಯೇ ಅಲ್ಲದೆ ಸಂಗೀತ, ನಾಟ್ಯದಲ್ಲಿಯೂ ಅದ್ಭುತವಾದ ಸಾಮರ್ಥ್ಯವನ್ನುಳ್ಳವರಾಗಿದ್ದರು. ಇವರಿಗೆ ಸಂಗೀತ ಸಾಹಿತ್ಯ ವಿಶಾರದ, ಸರಸ ವಿದ್ಯಾವಿಶಾರದ, ಎಂಬ ಬಿರುದುಗಳಿದ್ದವು. ಇವರ ಆಸ್ಥಾನದಲ್ಲಿ ವೀಣೆ ವಿಠಲ ನರಸಯ್ಯ ಮೊದಲಾದ ವಿದ್ವನ್ಮಣಿಗಳೂ, ಉಜ್ವಲ ಕಲಾವಿದರೂ ನಾಟ್ಯ ಶಾಸ್ತ್ರಜ್ಞರೂ ಇದ್ದರು. ಶೃಂಗಾರ ಕವಿಯೂ ಸಂಗೀತ ದುತ್ತುಂಗನೂ ಆಗಿದ್ದ ಭಾರತೀ ನಂಜನೆಂಬುವನು ಆಸ್ಥಾನ ಕವಿಯಾಗಿದ್ದನು. ಇಲ್ಲಿ ಜ್ಯೋತಿಷ್ಯ, ಕಾವ್ಯ, ನಾಟಕ, ಶಾಸ್ತ್ರ, ಸಂಗೀತ ಕೋವಿದರಿದ್ದರು. ವಿಶೇಷ ಸಂದರ್ಭಗಳಲ್ಲಿ ಆಸ್ಥಾನ ಕಲಾವಿದರು ರಾಜನ ಸಮ್ಮುಖದಲ್ಲಿ ಸಭಾಸದರನ್ನು ಗಾನ ನೃತ್ಯಗಳಿಂದ ತೃಪ್ತಿಪಡಿಸುತ್ತಿದ್ದರು. ಆಸ್ಥಾನ ವಿದ್ವಾಂಸನಾಗಿದ್ದ ಗೋವಿಂದ ವೈದ್ಯನು ತನ್ನ ಕಂಠೀರವ ನರಸರಾಜ ವಿಜಯದಲ್ಲಿ ರಾಜಧಾನಿಯಾದ ಶ್ರೀರಂಗ ಪಟ್ಟಣದಲ್ಲಿ ಸಂಗೀತ ನೃತ್ಯಗಳಿಗಿದ್ದ ಸ್ಥಾನಮಾನಗಳನ್ನು ಬಹು ವೈಭವದಿಂದ ವರ್ಣಿಸಿದ್ದಾನೆ. ರಾಜರ ಓಲಗದಲ್ಲಿದ್ದವರೂ ಸಂಗೀತ ಕಲಾಕೋವಿದರೂ ನಾಟ್ಯ ಪ್ರವೀಣರೂ ಆಗಿದ್ದರೆಂದು ವರ್ಣಿತವಾಗಿದೆ; ಇವರ ನಂತರ ಬಂದ ದೊಡ್ಡ ದೇವರಾಜ ಒಡೆಯರೂ ಕಲಾಭಿಮಾನಿಗಳಾಗಿದ್ದರು.

ಮುಂದೆ ಬಂದ ಚಿಕ್ಕದೇವರಾಜ ಒಡೆಯರು (1672–1714) ಕಲಾಪೋಷಕರಾಗಿ ಸ್ವಯಂ ವೈಣಿಕ ಪ್ರವೀಣರೂ ಆಗಿದ್ದರು. 'ರಸಿಕ ಜನ ಕರ್ಣ ರಸಾಯಿನೀ ಕೃತ ಸಂಗೀತ ವಿಸ್ತರ' ಎಂಬುದು ಅವರ ಬಿರುದು. ಅವರ ಆಸ್ಥಾನದಲ್ಲಿ ಸಂಗೀತ ಕಲೆಗೆ ಹೆಚ್ಚಿನ ಗೌರವಾಶ್ರಯಗಳಿದ್ದವು. ವೀಣೆ, ತಂಬುರ, ಮದ್ದಳೆ ಮತ್ತು ಮುಖ ವೀಣೆ ಇವು ಅವರ ಸಮಕಾಲೀನ ಸಾಹಿತ್ಯದಲ್ಲಿ ಪ್ರಮುಖವಾಗಿರುವ ಸಂಗೀತ ವಾದ್ಯಗಳು. ಆಸ್ಥಾನದಲ್ಲಿ ಹಲವಾರು ಕಲಾವಿದರಿದ್ದರು. ವೀಣಾವಾದನವು ಬಹು ಜನಪ್ರಿಯವಾಗಿದ್ದಿತು. ಸಂಗೀತಗಾರರಿಗೆ ಮುಕ್ತ ಹಸ್ತದಿಂದ ಬಹುಮಾನಗಳು ದೊರೆಯುತ್ತಿತ್ತು. ಆಸ್ಥಾನ ಜೀವನದಲ್ಲಿ ಸಾಂಸ್ಕೃತಿಕ ಕಲಾಪಗಳು ಅತ್ಯುಜ್ವಲವಾಗಿದ್ದವು. ಸಂಗೀತ, ಗಾನ, ನಾಟ್ಯ, ವಾದ್ಯ, ಅಭಿನಯಗಳು ಆಸ್ಥಾನದ ವಿಶೇಷ ಕಾರ್ಯಕ್ರಮದಲ್ಲಿ ಸೇರಿದ್ದವು. ಪಂಚ ಮಹಾ ವಾದ್ಯಗಳ ಉಲ್ಲೇಖ ಅನೇಕಸಲ ಬರುತ್ತದೆ. ಶಂಖ, ಭೇರಿ, ತಾಳ, ಜಂಬುಕ, ಡಿಂಡಿಮ, ಮುರಜ, ಢಕ್ಕೆ, ತಂಬಟ, ವೀಣಾ, ವೇಣು, ಕಹಳಾವಾದ್ಯಗಳ ಮೇಳವು ಅಂದಿನ ಕಾಲದಲ್ಲಿ ಅತ್ಯಂತ ಜನಪ್ರಿಯವಾಗಿದ್ದುವು. ವೈಣಿಕರು ವೀಣಾವಾದನತತ್ತ್ವ ಲಯಜ್ಞಾನ ಕುಶಲರಾಗಿದ್ದರು. ನೃತ್ಯವು ವೀರಾಂಗನೆಯರ ಆಸ್ತಿಯಾಗಿದ್ದಿತು. ಶ್ರುತಿ, ತಾಳ, ಮೃದಂಗ

ತಂತ್ರೀವಾದ್ಯಗಳ ಹಿತಮಿತವಾದ ಹಿನ್ನೆಲೆಯಿಂದ ಅವರ ನೃತ್ಯವು ನಡೆಯುತ್ತಿತ್ತು. ಚಿಕ್ಕದೇವರಾಜ ಒಡೆಯರು ಆಮೂಲಾಗ್ರವಾಗಿ ಸಂಗೀತ ತತ್ತ್ವಜ್ಞಾನವುಳ್ಳವರಾಗಿದ್ದರು. ತಮ್ಮ ವೀಣಾಶಾಲೆಯಲ್ಲಿ ವಿನೋದಾರ್ಥವಾಗಿ ವೀಣೆಯನ್ನು ನುಡಿಸಿ ಶ್ರೋತೃಗಳನ್ನು ಸಂತೋಷಮಗ್ನರನ್ನಾಗಿಸುತ್ತಿದ್ದರು. ಅವರು ವಿಷ್ಣುಭಕ್ತರು. 'ಚಿಕ್ಕದೇವರಾಜ ಬಿನ್ನಪ', 'ಗೀತಗೋಪಾಲ', 'ಭಾಗವತ', 'ಶೇಷಧರ್ಮ', 'ಭಾರತ', ಎಂಬವು ಅವರ ಕೃತಿಗಳು. ಇವುಗಳಲ್ಲಿ 'ಗೀತಗೋಪಾಲ' ವೆಂಬುದು ಜಯದೇವನ ಗೀತಗೋವಿಂದದ ಮಾದರಿಯಲ್ಲಿ ರಚಿತವಾಗಿರುವ ಗಾನ – ಪ್ರಧಾನವಾದ ಆಧ್ಯಾತ್ಮಿಕ ಗ್ರಂಥ. ಅವರ ಆಸ್ಥಾನವು ಸಂಗೀತ, ಸಾಹಿತ್ಯರಸಜ್ಞತೆಯ ತವರೂರಾಗಿತ್ತು. ಅವರೇ ನಾಯಕರಾಗಿರುವ 'ಚಿಕ್ಕದೇವರಾಜ ಸಪ್ತಪದಿ'ಯು ಒಂದು ಸಂಗೀತ ರೂಪಕ.

ಸಂಗೀತಕ್ಕೆ ಹೈದರ್ ಮತ್ತು ಟಿಪ್ಪೂಸುಲ್ತಾನರ ಕೊಡುಗೆ ಅಲ್ಪವೇನೂ ಅಲ್ಲ. ಫ್ರೆಂಚರ ಪ್ರಭಾವದಿಂದಲೋ ಏನೊ ಪಿಟೀಲು ವಾದ್ಯವು ಕರ್ಣಾಟಕ ಸಂಗೀತ ಮತ್ತು ನಾಟ್ಯದ ಪ್ರಧಾನ ಸಹಾಯಕ ವಾದ್ಯವಾಗಿ ಅವರ ಕಾಲದಲ್ಲಿ ಬಳಕೆಗೆ ಬಂದಿತು. ತಂಜಾವೂರಿನಲ್ಲಿ ಬಲಸ್ವಾಮಿ ದೀಕ್ಷಿತರೂ ತಿರುವಾಂಕೂರಿನಲ್ಲಿ ಸ್ವಾತೀ ತಿರುನಾಳ್ ಮಹಾರಾಜರೂ ಇದನ್ನು ಬಳಕೆಗೆ ತರುವುದಕ್ಕೆ ಮುಂಚೆಯೇ ಈ ವಾದ್ಯವು ಕರ್ಣಾಟಕದಲ್ಲಿ ರೂಢಿಗೆ ಬಂದಿದ್ದಿತು.

ಬ್ರಿಟಿಷರ ಆಡಳಿತವು ಒಡೆಯರ ಸಂಗೀತ ಪ್ರೇಮವನ್ನು ಸ್ವಲ್ಪವೂ ಕುಗ್ಗಿಸಲಿಲ್ಲ. ಅವರಿಂದ ನೇಮಿಸಲ್ಪಟ್ಟ ಮುಮ್ಮಡಿ ಕೃಷ್ಣರಾಜ ಒಡೆಯರು ಸ್ವತಃ ಉದ್ದಾಮ ಸಂಗೀತ ವಿದ್ವಾಂಸರಾಗಿದ್ದರು. ಹಾಗೆಯೇ ಶ್ರೇಷ್ಠ ಮಟ್ಟದ ಸಂಗೀತ ಶಾಸ್ತ್ರಜ್ಞರೂ ಆಗಿದ್ದರು. ಅವರ 'ಸ್ವರ ಚೂಡಾಮಣಿ'ಯು ಸಂಗ್ರಹವಾಗಿದ್ದರೂ ಸಂಗೀತ ಶಾಸ್ತ್ರ ಮತ್ತು ಸಂಪ್ರದಾಯ ವಿಷಯಗಳಿಂದ ಪರಿಪುಷ್ಟವಾಗಿದೆ. ಅವರ 'ಶ್ರೀತತ್ತ್ವ ನಿಧಿಯು' ಬಹು ಅಮೋಘವಾದ ಗ್ರಂಥ. ಬಹು ವಿಷಯ ಪೂರ್ಣವಾಗಿದೆ. ಸಂಗೀತ ಮತ್ತು ಸಂಗೀತ ಶಾಸ್ತ್ರದ ಬಹು ಆಧಾರಪೂರ್ಣವಾದ ವಿವರಗಳನ್ನೊಳಗೊಂಡಿದೆ, ಅಲ್ಲಿ ಬರುವ ಧ್ಯಾನ ಶ್ಲೋಕಗಳೂ, ರಾಗ ರಾಗಿಣೀ ಚಿತ್ರಗಳೂ ಅದರ ವಿಶೇಷ ಮೌಲ್ಯ. ಉದಾಹರಣೆಗಳಿಂದ ಕೂಡಿದ ಭರತನಾಟ್ಯ ವಿಷಯಕವಾದ 'ಭರತ ಸಾರ ಸಂಗ್ರಹವು' ಆ ಅಮೋಘ ವಿದ್ಯೆಯ ತತ್ತ್ವ ಮತ್ತು ಪ್ರಯೋಗಗಳ ಕೈಪಿಡಿ. ಅವರು ಉಭಯ ಭಾಷಾ ಪಂಡಿತರು. ಸಂಗೀತ ವೆಂದರೆ ಅವರಿಗೆ ಪಂಚಪ್ರಾಣ. ತಂಜಾವೂರು ಭೋಜನ ಆಸ್ಥಾನದಲ್ಲಿ ಪಾಂಡಿತ್ಯ ಪ್ರದರ್ಶನ ಮಾಡಿ ದಿಗ್ದಂತಿಗಳಾಗಿದ್ದ ಪ್ರಸಿದ್ಧ ವೀಣೆ ಕುಪ್ಪಯ್ಯನವರ ಮಕ್ಕಳಾದ ವೀಣೆ ವೆಂಕಟ ಸುಬ್ಬಯ್ಯನವರು ದಿವಾನ್ ಪೂರ್ಣಯ್ಯನವರ ಆಹ್ವಾನದ ಮೇಲೆ ಮೈಸೂರಿಗೆ ಬಂದು ರಾಜರ ವೀಣಾಗುರುಗಳಾದರು. ಇವರು ಇಲ್ಲಿ ಮುಂದೆ ಬಹುಪ್ರಖ್ಯಾತರಾದರು. ಇವರಿಗೆ ರಾಜರು ಗುರು ದಕ್ಷಿಣೆಯಾಗಿ ಮುತ್ತಿನ ಕುಚ್ಚಿನೊಡನಿದ್ದ, ಚಿನ್ನದ ವೀಣೆಯನ್ನು ಒಪ್ಪಿಸಿದರು. ವೆಂಕಟ ಸುಬ್ಬಯ್ಯನವರು 'ಸಪ್ತತಾಳೇಶ್ವರೀ ಗೀತೆ'ಯನ್ನು ರಚಿಸಿದ್ದಾರೆ. ತಿಲ್ಲಾನವನ್ನು ನುಡಿಸುವುದರಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಪಡೆದಿದ್ದ ವೀಣೆ ಸಾಂಬಯ್ಯ, ತಂಜಾವೂರಿನ ವೀಣೆ ಚಿಕ್ಕ ರಾಮಪ್ಪ, ಶೊಂಠಿ ವೆಂಕಟ ರಮಣಯ್ಯ, ನಾನಪಟ್ಟಣದ ಅಪ್ಪುಕುಟ್ಟಿ ನಟುವರ್, ಲಾಲ್ಗುಡಿ ರಾಮಯ್ಯರ್, ಇವರ ಮಕ್ಕಳಾದ ಗುರುಸ್ವಾಮಯ್ಯರ್ ಮತ್ತು ರಾಮಕೃಷ್ಣಯ್ಯರ್ ಮೊದಲಾದವರು ಕೃಷ್ಣರಾಜರ ಆಸ್ಥಾನ ವಿದ್ವಾಂಸರಾಗಿದ್ದರು. ಲಾಲ್ಗುಡಿ ರಾಮಯ್ಯನವರೇ ಮುಂದೆ ಪಲ್ಲವೀ ರಾಮಯ್ಯರೆಂದು ಪ್ರಸಿದ್ಧರಾದರು. ಇವರು ತಲೆಯ ಮೇಲೆ ನಿಂಬೇಹಣ್ಣನ್ನ ಇಟ್ಟುಕೊಂಡು ಅದು ಕೆಳಗೆ ಬೀಳದಂತೆ ಚೌಕ ಕಾಲದ ಪಲ್ಲವಿಯನ್ನು ಹಾಡಿ ಚಿನ್ನದ ತೋಡವನ್ನು ಸಂಪಾದಿಸಿದ್ದರು. ತ್ಯಾಗರಾಜರ ಪ್ರಶಿಷ್ಯರಾದ ಮೈಸೂರು ಸದಾಶಿವರಾಯರೂ ಆಸ್ಥಾನದ ವಿದ್ವಾಂಸರಾಗಿದ್ದರು. ವೀಣೆ ಶೇಷಣ್ಣ, ವೀಣೆ ಸುಬ್ಬಣ್ಣ, ಚಿಕ್ಕನಾಯಕನ ಹಳ್ಳಿ ವೆಂಕಟೇಶಯ್ಯ ಗಂಜಾಂ ಸತ್ಯನಾರಾಯಣಪ್ಪ ಮುಂತಾದವರು ಇವರ ಶಿಷ್ಯರು. ಆಸ್ಥಾನದ ಮತ್ತೊಬ್ಬ ಪ್ರಸಿದ್ಧ ವಿದ್ವಾಂಸರಾಗಿದ್ದ ಮೂಗೂರು ಸುಬ್ಬಣ್ಣನವರು ಹಲವು ಸ್ವರಜತಿ, ವರ್ಣ ಮತ್ತು ಕೃತಿಗಳನ್ನು ರಚಿಸಿದ್ದಾರೆ. ಈ ಕಾಲದ ಬೇರೊಬ್ಬ ಸುಪ್ರಸಿದ್ಧ ವೈಣಿಕರು ಸವ್ಯಸಾಚಿ ಅಯ್ಯಂಗಾರ್. ಇವರು ಎರಡು ಕೈಗಳಿಂದಲೂ ವೀಣೆಯನ್ನು ಬಾಜಿಸುತ್ತಿದ್ದರು. ಪಚ್ಚಿಮಿರಿಯಂ ಆದಿ ಅಪ್ಪಯ್ಯನವರ ಮಕ್ಕಳು ವೀಣೆ ಕೃಷ್ಣಯ್ಯನವರು ಮಹಾರಾಜರನ್ನು ಕುರಿತು ಅನೇಕ ಕೃತಿಗಳನ್ನು ರಚಿಸಿದ್ದಾರೆ. ತಿಚ್ಚೂರು ಶಿಂಗರಾರ್ಯ, ವೀಣೆ ಶಾಮಣ್ಣ, ಪದ್ಮನಾಭಯ್ಯ ಮೊದಲಾದವರು ಇವರ ಆಸ್ಥಾನದ ಪ್ರಮುಖ ವಿದ್ವಾಂಸರು. ಪ್ರತಿಶಿವರಾತ್ರಿ ಹಬ್ಬದ ರಾತ್ರಿ ಪೂರ್ಣವಾಗಿ ಸ್ಥಳ ಪರಸ್ಥಳ ವಿದ್ವಾಂಸರ ಕಛೇರಿ ನಡೆಯುತ್ತಿತ್ತು. ಅನೇಕರು ಪರಸ್ಥಳದಿಂದ ಬಂದು ರಾಜಾಶ್ರಯವನ್ನು ಪಡೆದು ಇಲ್ಲಿಯೇ ನೆಲೆಸಿರುವುದೂ ಉಂಟು. ಪ್ರಖ್ಯಾತ ಹರಿದಾಸರಾಗಿದ್ದ ಸುರಪುರದ ಆನಂದದಾಸರು ಮೈಸೂರಿನಲ್ಲಿ ಎರಡು ವರ್ಷಗಳಕಾಲ ತಂಗಿದ್ದರು. ಅವರು ರಚಿಸಿದ್ದ ನಲವತ್ತು ಕೀರ್ತನೆಗಳನ್ನು ಕೇಳಿ ರಾಜರು ದಾಸರನ್ನು ಭದ್ರಪೀಠದಲ್ಲಿ ಕುಳ್ಳಿರಿಸಿ ಕನಕ ಕಂಠಿಗಳಿಂದ ಅಲಂಕರಿಸಿ ಕನಕಾಭಿಷೇಕ ಮಾಡಿದರು.

ಮುಮ್ಮಡಿ ಕೃಷ್ಣರಾಜರ ಉತ್ತರಾಧಿಕಾರಿಗಳಾದ ಚಾಮರಾಜ ಒಡೆಯರು (1868–1894) ವಿಶೇಷ ಸಂಗೀತ ಪ್ರಿಯರು. ಪ್ರವರ್ಧಮಾನಕ್ಕೆ ಬರುತ್ತಿದ್ದ ವೀಣೆ ಶೇಷಣ್ಣನವರನ್ನು ಆಸ್ಥಾನ ವಿದ್ವಾಂಸರನ್ನಾಗಿ ಸ್ವೀಕರಿಸಿದರು. ಶೇಷಣ್ಣನವರ ಬಂಧುಗಳಾದ ವೀಣೆ ಸುಬ್ಬಣ್ಣನವರೂ ಆಸ್ಥಾನ ವಿದ್ವಾಂಸರಾದರು ಶೇಷಣ್ಣನವರ ತಂದೆಯವರಾದ ಚಿಕ್ಕ ರಾಮಪ್ಪನವರು ಹಿರಿಯ ವೈಣಿಕ ವಿದ್ವಾಂಸರಾಗಿದ್ದರು.

ಮತ್ತೊಬ್ಬ ವಿದ್ವಾಂಸರಾಗಿದ್ದ 'ಸಂಗೀತ ವಿದ್ಯಾ ಕಂಠೀರವ' ಎಂಬ ಬಿರುದಾಂಕಿತರಾದ ಕರಿಗಿರಿರಾಯರು 'ನರಸಿಂಹ' ಎಂಬ ಅಂಕಿತದಲ್ಲಿ ಅನೇಕ ಕೃತಿಗಳನ್ನು ರಚಿಸಿರುವುದಲ್ಲದೆ 'ಸಂಗೀತ ಸರ್ವ ರಹಸ್ಯ ಬೋಧಿನಿ' ಮತ್ತು 'ಸಂಗೀತ ಸಂಬೋಧಿನಿ' ಎಂಬ ಎರಡು ಗ್ರಂಥಗಳನ್ನು ರಚಿಸಿದ್ದಾರೆ. ಬಿಡಾರಂ ಕೃಷ್ಣಪ್ಪನವರೂ ಚಿಕ್ಕರಾಮರಾಯರೂ ಇವರ ಶಿಷ್ಯರು. ಶೇಷಣ್ಣನವರ ಸಲಹೆಯ ಮೇಲೆ ಆಗಿನ ವಿದ್ವಾಂಸರುಗಳಿಂದ ಮಹಾವೈದ್ಯನಾಥಯ್ಯರ್, ಪಟ್ಣಂ ಸುಬ್ರಹ್ಮಣ್ಯ ಅಯ್ಯರ್, ಬರೋಡದ ಮೌಲಾಭಕ್ಷ್ ಮುಂತಾದ ವಿದ್ವಾಂಸರನ್ನು ಆಹ್ವಾನಿಸಿ ರಾಜರು ಸನ್ಮಾನಿಸಿದರು. ಮಹಾರಾಜರು ಸದಾ ಸಂಗಿತ ಗುರುಗಳೊಡನೆಯೆ ಕಾಲಕಳೆಯುತ್ತಿದ್ದರು. ಅನೇಕಸಲ ಅವರು ಶೇಷಣ್ಣನವರ ವೀಣೆ ಮತ್ತು ಸುಬ್ಬಣ್ಣನವರ ಹಾಡುಗಾರಿಕೆಯ ಜೊತೆಗೆ ತಾವು ಪಿಟೀಲು ವಾದಿಸುತ್ತಿದ್ದರು. ಈ ಕಾಲದಲ್ಲಿಯೇ ಶೇಷಣ್ಣನವರಿಂದ ಜಲತರಂಗ ವಾದ್ಯವು ರೂಢಿಗೆ ಬಂದಿತು. ಅವರೇ ಈ ವಾದ್ಯದ ಪ್ರಥಮ ವಿದ್ವಾಂಸರು. ವಾಸುದೇವಾಚಾರ್ಯರು ತಿರುವೈಯಾರಿಗೆ ಹೋಗಿ ವ್ಯಾಸಂಗ ಮಾಡುವುದಕ್ಕೆ ಚಾಮರಾಜರೇ ಸಹಾಯ ಮಾಡಿದರು. ಸಂಗೀತದ ಶ್ಯಾಮರಾಯರು, ವೀಣೆ ಶಾಮಣ್ಣ, ಅವಧೂತದ ಚನ್ನಮಲ್ಲಪ್ಪ, ರಾಮಲಿಂಗಯ್ಯ ಭರತನಾಟ್ಯದ ತಿರುಮಕೂಡಲು ಸುಂದರಮ್ಮ – ಇವರು ಚಾಮರಾಜ ಒಡೆಯರ ಆಸ್ಥಾನ ವಿದ್ವಾಂಸರಾಗಿದ್ದರು. ಜೆಟ್ಟಿತಾಯಮ್ಮ ಮತ್ತು ಗಿರಿ ಬಸಪ್ಪನವರು ಈ ಕಾಲದ ಪ್ರಖ್ಯಾತ ನಾಟ್ಯವಿದರು. ಚಾಮರಾಜರು ಮೊತ್ತಮೊದಲು ತಮ್ಮ ಆಸ್ಥಾನದಲ್ಲಿ ಸಂಗಿತಜ್ಞರನ್ನು ನಾಟ್ಯಗಾರರನ್ನು ಒಟ್ಟು ಗೂಡಿಸಿ ಒಂದು ಖಾಸಗಿ ನಾಟ್ಯ ಸಂಸ್ಥೆಯನ್ನು ಸ್ಥಾಪಿಸಿದರು. ಅತ್ಯುತ್ತಮ ಕಲಾವಿದರನ್ನು ಒಟ್ಟುಗೂಡಿಸಿದರು. ಅವರ ಕಾರ್ಯ ಚಿರಸ್ಮರಣೀಯವಾಗಿದೆ.

(ಸಶೇಷ)

# ನಾಟ್ಯ ಕಲೆಯ ಇತಿಹಾಸ

ಮೂಲ :

**ಡಾ || ಎಂ. ಸಂಗಮೇಶಂ**

ಅನುವಾದ :

**ಶ್ರೀಮತಿ ಎಸ್. ವಿ. ಹೇಮಾವತಿ**

ನಮ್ಮ ದೇಶದಲ್ಲಿ ಮಾನವ ಎಂದಿನಿಂದ ಜೀವಿಸಿರುವನೆಂದು ತಿಳಿಯದ ಅಂಶವಾದುದರಿಂದ ನಾಟ್ಯ ನಮ್ಮ ದೇಶದಲ್ಲಿ ಎಂದಿನಿಂದ ಪ್ರಚಾರದಲ್ಲಿ ಇದೆಯೆಂಬುದು ಮತ್ತೂ ತಿಳಿಯದ ಅಂಶವಾಗಿದೆ. ತಿಳಿದಿರುವುದೆಂದರೆ ಕ್ರಿ. ಪೂ. ನಾಲ್ಕು ಸಾವಿರ ವರ್ಷಗಳಿಗೆ ಮೊದಲು ಈ ದೇಶದಲ್ಲಿ ಪಟ್ಟಣವಾಸದ ನಾಗರಿಕತೆಯ ಸಮಸ್ತ ಭೋಗಭಾಗ್ಯಗಳನ್ನು ಅನುಭವಿಸುತ್ತಿದ್ದ ಮಾನವ ಸಮಾಜ ಇದ್ದಿತೆಂದು ಮಾತ್ರ. ಇದಕ್ಕೆ ಆಧಾರ ಮೊಹಂಜೋದಾರೋ, ಹರಪ್ಪಾಗಳಲ್ಲಿ ನಡೆಸಲಾದ ಪುರಾತತ್ತ್ವ ಪರಿಶೋಧನೆಗಳು. ಆ ದಿನಗಳಲ್ಲಿ ನಾಟ್ಯ ಯಾವ ಸ್ಥಿತಿಯಲ್ಲಿದ್ದಿತೆಂಬುದನ್ನು ತಿಳಿಯಲು ತಕ್ಕ ಆಧಾರಗಳೂ ಅಲ್ಲಿ ದೊರೆತಿವೆ. ಅಲ್ಲಿ ಉತ್ಖನನ ಮಾಡಿ ತೆಗೆದ ವಸ್ತುಗಳಲ್ಲಿ ಒಬ್ಬ ನೃತ್ಯಗಾರ್ತಿಯ ವಿಗ್ರಹವೂ ಉಂಟು. ಆದರೆ ಇದು ನಗ್ನ ಮೂರ್ತಿ. ಅಲಂಕರಣವನ್ನು ಕುರಿತು ಅಷ್ಟಾಗಿ ತಿಳಿದುಬರದು. ಇದರ ಒಂದು ಕೈಗೆ ಮಾತ್ರ ಮೊಳಕೈವರೆಗೆ ಬಳೆಗಳೂ ಕಂಕಣವೂ ಇದ್ದು ಅವನ್ನು ತೋಳವರೆಗೆ ಧರಿಸಿರುವಂತೆ ಚಿತ್ರಗಳನ್ನು ನೋಡಿ ತಿಳಿಯಬಹುದು. ಕೊರಳಿನಲ್ಲೂ ಎಂಥದೋ ಒಂದು ಆಭರಣವಿದೆ. ಅಷ್ಟು ಮಾತ್ರದ ಆಹಾರ್ಯದ ಹೊರತು ಅಂದಿನ ನಾಟ್ಯವನ್ನು ಕುರಿತು ತಿಳಿಯಲು ಬೇರೆ ಆಧಾರಗಳಿಲ್ಲ. ಇನ್ನೂ ಊಹಿಸಿದರೆ ಈ ಮೂರ್ತಿ ದಿಗಂಬರೆಯಾದುದರಿಂದ ನಾಟ್ಯ ಅಂದಿಗೇ ವಿಲಾಸಯುಕ್ತವಾಗಿದ್ದಿತೆಂದು ಗ್ರಹಿಸಬಹುದು. ಎ. ಎಸ್. ಪಿ. ಅಯ್ಯಂಗಾರ್ ಅವರು ಒಮ್ಮೆ ಮಾತನಾಡುತ್ತ 'ಯಾವ ಕುಚೇಷ್ಟೆಯ ಯಜಮಾನನೋ ಹೀಗೆ ದಿಗಂಬರೆಯರನ್ನಾಗಿ ಮಾಡಿ ನೃತ್ಯಭಂಗಿಗಳಲ್ಲಿ ನಿಲ್ಲಿಸಿ ತನ್ನ ದಾಸಿಯರನ್ನು ನೋಡಿ ಸಂತಸ ಪಟ್ಟಿರಬಹುದು.' ಎಂದು ಈ ವಿಗ್ರಹದ ಬಗ್ಗೆ ತಮ್ಮ ಕಲ್ಪನೆಯನ್ನು ಪ್ರಕಟಿಸಿದರು. ಅದು ನಿಜವಾದಲ್ಲಿ ನೃತ್ಯ ಆ ಕಾಲಕ್ಕೆ ಅಂತಃಪುರ ವಿಲಾಸವಾಗಿ ರೂಪುಗೊಳ್ಳುವ ಸ್ಥಿತಿಗೆ ಬಂದಿರಬಹುದೆಂದು ಭಾವಿಸಬಹುದು. ಆದರೆ ಆಧಾರ ಕಡಿಮೆ ಇರುವಾಗ ಊಹೆ ಹೆಚ್ಚಾದರೆ ತಥ್ಯಕ್ಕೆ ಮೋಸವಾಗುತ್ತೆ, ಇಷ್ಟಕ್ಕೂ ಇವುಗಳು ನಾಟ್ಯಮೂರ್ತಿಗಳೆಂದು ಭಾವಿಸುವುದೆಷ್ಟು ಸಂಗತ ?

ಮೊಹಂಜೋದಾರೋ ಹರಪ್ಪ ನಾಗರಿಕತೆಗಳ ಹೊರತಾಗಿ ಮತ್ತೆ ನಮ್ಮ ದೇಶದ ನಾಗರಿಕತೆಯನ್ನು ಕುರಿತು ತಿಳಿದುಕೊಳ್ಳಲು ಆಧಾರಗಳೆಂದರೆ ವೇದಗಳು ಮಾತ್ರವೇ. ಇವೆರಡೂ ಕಾಲಗಳಿಗೂ ಮಧ್ಯದ ಅಂತರ ಸುಮಾರು ಸಾವಿರಕ್ಕೂ ಹೆಚ್ಚು ವರ್ಷಗಳು. ಈ ವೇದಗಳು ವಿವರಿಸುವ ನಾಗರಿಕತೆ ಆರ್ಯರದು. ಮೇಲೆ ಹೇಳಿದ ಮೊಹಂಜೋದಾರೋ ನಾಗರಿಕತೆ ಈ ಆರ್ಯ ನಾಗರಿಕತೆಗಿಂತ ಅನೇಕ ಅಂಶಗಳಲ್ಲಿ ಉನ್ನತವೆಂಬುದು ತಿಳಿದವರ ಅಭಿಮತ. ನಾಗರಿಕತೆ ಉನ್ನತವಾದಾಗ ನಾಟ್ಯಕಲೆಯೂ ಉನ್ನತವಾಗಿ ಇರುತ್ತದೆ ಎಂಬ ಊಹೆ ತಪ್ಪಾಗದು. ಉನ್ನತವಾದ ಕಲೆ ಎಂದೂ ಹೃದಯವನ್ನು ಆಕರ್ಷಿಸುತ್ತದೆ. ಹೃದಯಧರ್ಮ ಎಲ್ಲೆಲ್ಲಿ ವರ್ತಿಸುವುದೋ ಅಲ್ಲೆಲ್ಲ ಬುದ್ಧಿಜನ್ಯ ಸಂಕುಚಿತ ಭಾವಗಳಿಗೆ ಸ್ಥಾನವಿರದು ಈ ಕಾರಣದಿಂದಾಗಿ ಆರ್ಯರಿಗೂ ಆರ್ಯೇತರರಿಗೂ ಇತರ ಕ್ಷೇತ್ರಗಳಲ್ಲಿ ವಿವಾದಗಳೇರ್ಪಟ್ಟರೂ ಕಲಾಕ್ಷೇತ್ರದಲ್ಲಿ ಮಾತ್ರ ಹೊಂದಿಕೆಯೂಯಿತು. ಎರಡೂ ಸಂಪ್ರದಾಯಗಳೂ ನಿರಕ್ಷೀರ ನ್ಯಾಯದಿಂದ ಬೆರೆತು ಒಂದೇ ಭಾರತೀಯ ಸಂಪ್ರದಾಯವಾಗಿ ಕಲಾವಿಕಾಸಕ್ಕೆ ನೆರನಾದವು. ಹೀಗೆ ವಿಕಸನಗೊಂಡ ನಾಟ್ಯ ಕಲೆಯನ್ನು ಕುರಿತು ತಿಳಿದುಕೊಳ್ಳಲು ವೈದಿಕ ಸಾಹಿತ್ಯ ಹೆಚ್ಚು ನೆರವು ನೀಡುತ್ತದೆ. ಋಗ್ವೇದದ ವರ್ಣನೆಗಳಿಂದಾಗಿ ಅಂದು ನಾಟ್ಯದಲ್ಲಿ ಧರಿಸಲು ಥಳಥಳಿಸುವ ವಸ್ತ್ರಗಳನ್ನು ಬಳಸುತ್ತಿದ್ದರೆಂದೂ, (1–92–4) ನಟರು ಚಿನ್ನದಾಭರಣಗಳನ್ನೂ ತೊಡುತ್ತಿದ್ದರೆಂದೂ (7-20-22) ಅಂಗಚಾಲನಾದಿ ಅಭಿನಯದಲ್ಲಿಯೂ ಸಹ ನೋಡುವವರ ದೃಷ್ಟಿಯನ್ನು ಆಕರ್ಷಿಸುವ ಪ್ರಯತ್ನ ಪ್ರಧಾನವಾಗಿ ಇರುತ್ತಿದ್ದಿತೆಂದೂ (6–29–3) ವೀರನೃತ್ಯ (6–63–5) ವಿಜಯೋತ್ಸವಗಳಲ್ಲಿ ಬೃಂದನೃತ್ಯಗಳು, (10–29–2) ಸಂಗೀತ ನೃತ್ಯಗಳು, ಗಾಥಾನೃತ್ಯಗಳು ಮೊದಲಾದವು ಆಚಾರದಲ್ಲಿದ್ದವೆಂದು (8-24-12) (5–33–6) ಸ್ಪಷ್ಟವಾಗಿ ತಿಳಿಯುತ್ತದೆ. ಆಯಾ ವರ್ಣನೆಗಳಿಂದ ನಾಟ್ಯದಲ್ಲಿ ಪರಿಣತಿ ಪಡೆದ ನಟರು ನಟಿಯರು ಸಹ ಅಂದಿಗೇ ಇದ್ದರೆಂಬುದೂ ಏಕಪಾತ್ರಾಭಿನಯ, ಬೃಂದನೃತ್ಯಗಳು ಅಂದಿಗೇ ಪ್ರಭಾವದಲ್ಲಿ ಇದ್ದಿತೆಂದೂ ತಿಳಿದುಬರುತ್ತದೆ. ಇಷ್ಟೇ ಅಲ್ಲ ಕೆಳಗಣ ಋಕ್ಕುಗಳು ಅಂದಿನ ನಾಟ್ಯವನ್ನು ಈ ರೀತಿ ವಿವರಿಸುತ್ತವೆ.

"ನಮ್ಮ ಜೀವನವನ್ನು ಸುದೀರ್ಘಗೊಳಿಸಿಕೊಂಡು ಸಂತಸಗೊಳ್ಳಲು ನಾವು ನಾಟ್ಯದಲ್ಲಿ ನಗೆಯಲ್ಲಿ ತೊಡಗಿದೆವು (10–18–3)

"ಓ ದೇವತೆಗಳೇ ! ಒಬ್ಬರ ಕೈಯ್ಯನ್ನೊಬ್ಬರು ಹಿಡಿದು ದೂರವಾಗಿ ನೀವು ನಿಂತಿರಲು ನರ್ತಕರ ಪಾದಗಳಿಂದ ಹೊಮ್ಮುವಂತೆ ನಿಮ್ಮ ಪಾದಗಳಿಂದಲೂ ಧೂಳೀ ಮೇಘಗಳು ದಟ್ಟವಾಗಿ ಹೊಮ್ಮುತ್ತಿವೆ." (10–72–6)

"ಕುಡಿದು ಮತ್ತೇರಿ ಕೆವ್ವನೆ ಕಿರಿಚುತ್ತಾ ಇಂದ್ರನನ್ನು ಆಹ್ವಾನಿಸುತ್ತ ತಮ್ಮ ಅಕ್ಕ ತಂಗಿಯರೊಡನೆ ಜೊತೆಗೆ, ಬಹಿರಂಗವಾಗ ಅವರ ಆಲಿಂಗನದಲ್ಲಿ ಸೇರಿ ಅವರೆಲ್ಲ ಭೂಮಿ ನಡುಗಿ ಪ್ರತಿಧ್ವನಿಸುವಂತೆ ಅಡಿಗಳನ್ನಿಟ್ಟು ನರ್ತಿಸಿದರು. (10–94–4)

ಕಲೆ ನೀತಿ ಎನ್ನುವುದು ಒಂದೇ ತಕ್ಕಡಿಯ ಎರಡು ತಟ್ಟೆಗಳು. ಒಂದು ಮೇಲೇರಿದಾಗ ಇನ್ನೊಂದು ಕೆಳಜಾರುವುದು ನಿತ್ಯ ಸತ್ಯ. ಈ ಏರಿಳಿತವನ್ನು ಸರಿಹೊಂದಿಸಿ ಸಮಮಾಡುವ



ಪ್ರಯತ್ನವೇ ಶಿಕ್ಷಣಸಂಬಂಧದ ವಿಧಿ ವಿಧಾನಗಳಲ್ಲೂ ನಿಯಮ ನಿಷೇಧಗಳಲ್ಲೂ ವ್ಯಕ್ತವಾಗುತ್ತಿರುತ್ತವೆ. ಋಗ್ವೇದ ಕಾಲದಲ್ಲೇ ನಾಟ್ಯವಲ್ಲಿ ಬೆರೆತುಹೋದ ಅಸೀತಿ ನಂತರದ ಕಾಲಗಳಲ್ಲಿ ಎಷ್ಟು ಬಗೆಬಗೆಯಾದವೆಂಬುದನ್ನು ಮುಂದೆ ನೋಡಬಹುದು.

ಯಜುರ್ವೇದ ಕಾಲದಲ್ಲಿ ನರ್ತಕರು ಪ್ರತ್ಯೇಕ ಜಾತಿಯವರಾಗಿ ಪರಿಗಣಿತರಾದರೆಂದು ಕಂಡು ಬರುತ್ತದೆ. ನರ್ತಕರೇ ಅಲ್ಲ; ಗಾಯಕರು, ವಾದಕರು ಮೊದಲಾದವರೂ ಸಹ ವೈಣಿಕ, ವಾಂಶಿಕಾದಿ ಹೆಸರುಗಳಿಂದ ವ್ಯವಹರಿಸುತ್ತಿದ್ದರು. ಅಂದಿಗೆ ವೀಣೆ, ವಾಣ,ವೇಣು, ಶಂಖ, ಮೃದಂಗ ಮೊದಲಾದ ವಾದ್ಯ ವಿಶೇಷಗಳೆಷ್ಟೋ ಪ್ರಚಲಿತವಾದವು. ಅವುಗಳಲ್ಲಿ ವಾಣದಂತಹವು ಇಂದು ನಮಗೆ ಕಾಣದು. ಹೀಗೆ ಕೊನೆಯಾದವುಗಳೆಷ್ಟೋ!

ಸಾಮವೇದ ಸಾಮಗಾನವೆಂದೇ ಹೆಸರು ಪಡೆದಿದೆ. ಅಥರ್ವಣ ವೇದದಲ್ಲಿ ಹಲವಾರು ವಾದ್ಯ ವಿಶೇಷಗಳು ವರ್ಣಿತವಾಗಿವೆ. ಇವು ಆಯಾ ಕಾಲದಲ್ಲಿ ಬಳಕೆಗೆ ಬಂದಿರಬಹುದು. ಈ ವೇದಗಳಲ್ಲಿ ಸಂಗೀತ ಸಭೆಗಳಿಗೆ ಹಲವು ನಿಯಮಗಳು ಸಹ ಹೇಳಲ್ಪಟ್ಟಿವೆ. ಇದೇ ರೀತಿಯಾಗಿ ಬೃಹದಾರಣ್ಯಕ, ಛಾಂದೋಗ್ಯಗಳಲ್ಲೂ ಋಕ್ ಪ್ರಾತಿಶಾಖ್ಯೆಯಲ್ಲೂ ಬರುವ ವರ್ಣನೆಗಳಿಂದ ಆಯಾಕಾಲದ ನೃತ್ಯಗೀತಗಳ ಸ್ಥಿತಿಗತಿಗಳು ಬಹುಮಟ್ಟಿಗೆ ತಿಳಿದು ಬರುತ್ತವೆ. ಸಂಗೀತದಲ್ಲಿ ಸ್ವರಪ್ರಸ್ತಾರವನ್ನು ಕುರಿತು ತುಸು ಪರಿಶ್ರಮ ನಡೆಯಿತು. ನಿರಂತರವಾಗಿ ಕಲಾಭ್ಯಾಸ ನಡೆಯಿತು. ಕಲೆಗಾರರು ಬೇರೆ ಬೇರೆ ಕುಲಗಳಾಗಿ ವಿಭಾಗಿಸಲ್ಪಟ್ಟರು.

ಸೂತ್ರಕಾಲದಲ್ಲಿನ ಧಾರ್ಮಿಕ ಕಾರ್ಯಕ್ರಮಗಳಲ್ಲಿ ನಾಟ್ಯ ಅವಶ್ಯಾಚರಣೀಯ ಅಂಗವಾಗಿ ಗ್ರಹಿಸಲ್ಪಟ್ಟಿದ್ದಿತು. ಆರಾಧಿಸಲ್ಪಡುವ ದೇವೀ ದೇವತೆಗಳೆಲ್ಲ ನೃತ್ಯಪ್ರಿಯರೂ ಗೀತಪ್ರಿಯರೂ ಆಗಿ ಹೆಸರಿಸಲ್ಪಟ್ಟರು. ಧೂಪದೀಪ ನೈವೇದ್ಯಾದಿಗಳೊಡನೆಯೇ ನೃತ್ಯಗೀತೆಗಳಿಂದಲೂ ಅವರನ್ನು ಪೂಜಿಸಬೇಕೆಂಬ ವಿಧಿಯುಂಟಾಯಿತು. ದೈವಾರಾಧನೆಯೊಡನೆ ನೃತ್ಯಗೀತೆಗಳೂ ಪವಿತ್ರತೆಯನ್ನು ಹೊಂದಿದವು. ಈ ಪಾವಿತ್ರ್ಯವನ್ನು ಕೆಡದಂತೆ ರಕ್ಷಿಸಬೇಕೆಂದು ಸಂಕಲ್ಪದಿಂದಾಗಿ ಇವುಗಳಿಗೆ ಸಂಬಂಧಿಸಿದ ವಿಧಿನಿಷೇಧಗಳನ್ನು ಸೂತ್ರಪ್ರಾಯವಾಗಿ ಕ್ರೋಡೀಕರಿಸಲು ಪ್ರೋತ್ಸಾಹ ದೊರೆಯಿತು. ಆ ಕಾಲದಲ್ಲಿ ರಚಿತವಾದ ನಾಟ್ಯ ಸೂತ್ರಗಳು ಇಂದು ಉಪಲಬ್ಧವಿಲ್ಲವಾದರೂ ಸೂತ್ರ ರಚನೆ ನಡೆಯಿತು ಎನ್ನಲು ಪಾಣಿನೀಯದ "ಕರ್ಮಂದಕ ಕೃಶಾಶ್ವಾದಿನಃ", "ಪಾರಾಶರ್ಯಸಿ ಲಾಲಿಭ್ಯಾಂ ಭಿಕ್ಷುನಟ ಸೂತ್ರಯೋಃ" ಎನ್ನುವ ವಾಕ್ಯಗಳು ಪರಮ ಪ್ರಮಾಣವಾಗಿವೆ. ಇದರಿಂದಾಗಿ ನಾಟ್ಯಕ್ಕೆ ರೂಪ, ರೇಖೆ, ನೆಲೆಗಳು ಸಾಧಿತವಾದದ್ದೇ ಅಲ್ಲದೆ, ನಟನಟಿಯರಿಗೂ ಸಹ ಸಮಾಜದಲ್ಲಿ ಆದರ ಅಭಿಮಾನ ಪ್ರೋತ್ಸಾಹ ದೊರೆಯಿತು. ದೇವೋಪಚಾರದೊಂದಿಗೇ ರಾಜೋಪಚಾರಗಳೂ ಸಹ ಆದರ ಸಮಾನವಾದ ವಿಜೃಂಭಣೆಯಿಂದ ಆಚರಿಸಲ್ಪಡುತ್ತಿದ್ದವು. ಹಾಗಾಗಿ ನಾಟ್ಯ ರಾಜಸೇವೆಯಲ್ಲೂ ಉಪಾದೇಯವೆನಿಸಿತು. ರಾಜಾಶ್ರಯ, ಸಭಾಗೌರವಗಳು ಪಂಡಿತರೊಡನೆಯೇ ನಟ, ವಿಟ, ಗಾಯಕರಿಗೂ ದೊರೆತವು. ಈ ಆಶ್ರಯ ಆದರಗಳು ಕಲೆಯ ಅಭಿವೃದ್ಧಿಗೆ ಎಷ್ಟು ಸಹಕರಿಸಿದವೋ ಅಷ್ಟೇ ಮಟ್ಟಿಗೆ ಕಲೆಯನ್ನು ವಿಲಾಸವನ್ನಾಗಿಸುವಲ್ಲಿಯೂ ಸಹಕರಿಸಿದವು.

ರಾಮಾಯಣದಲ್ಲಿ ಮಂದಕರ್ಣಿ ವೃತ್ತಾಂತದಿಂದಾಗಲೀ, ರಾವಣನ ಶಯನಗಾರ ವರ್ಣನೆಯಲ್ಲಾಗಲೀ ಅಂದಿಗೇ ನೃತ್ಯ ಗೀತಾದಿಗಳಿಗೂ ವಿಲಾಸಕ್ಕೂ ಅವಿನಾಭಾವ ಸಂಬಂಧವಿದ್ದಿತೆಂದು ತಿಳಿದು ಬರುತ್ತದೆ. ಅಯೋಧ್ಯಾಪುರ ವರ್ಣನೆಯಲ್ಲಿನ 'ವಧೂನಾಟಕ ಸಂಘೈಶ್ಚ ಸಂಯುಕ್ತಾಂ ಸರ್ವತಃ ಪುರೀಂ' – ಎನ್ನುವ ಮಾತಿನಿಂದ ಅಂದಿಗೇ ನಾಟಕ ಸಂಘಗಳೂ ಇದ್ದಂತೆಯೂ, ಅವುಗಳಲ್ಲಿ ಸ್ತ್ರೀಯರೂ ಭಾಗವಹಿಸುತ್ತಿದ್ದಂತೆಯೂ ತಿಳಿದು ಬರುತ್ತದೆ. ಭಾರತದಲ್ಲಿ ರಾಜಾಸ್ಥಾನಗಳಲ್ಲೂ ಅಂತಃಪುರಗಳಲ್ಲಿಯೂ ಸಹ ನೃತ್ಯಗೀತೆಗಳು ಶೋಭಾಯಮಾನವಾಗಿ ಅರಳುತ್ತಿದ್ದ

ವೆಂಬುದೇ ಅಲ್ಲದೆ, ರಾಜಪರಿವಾರದ ಯುವಕ ಯುವತಿಯರು ಇತರ ವಿದ್ಯೆಗಳೊಂದಿಗೇ ನೃತ್ಯ ಗೀತೆಗಳನ್ನೂ ಸಹ ಅಭ್ಯಾಸ ಮಾಡುತ್ತಿದ್ದರೆಂದು ತಿಳಿಯಲು ಆಧಾರಗಳಿವೆ. ಅರ್ಜುನನು ಬೃಹನ್ನಳೆ ಯಾಗಿ ಮಾಡಿದ ಕೆಲಸವೇ ಯುವತಿಯರಿಗೆ ಆಟ ಪಾಟಗಳಲ್ಲಿ ತರಬೇತಿ ನೀಡುವಿಕೆ. ಆದರೆ ಭಾರತ ದಲ್ಲೇ ನೃತ್ಯವನ್ನು ವೃತ್ತಿಯನ್ನಾಗಿ ಹೊಂದಿದ ವರು ನೀತಿ ಬಾಹಿರರೆಂಬೂ, ಸಮಾಜದಲ್ಲಿ ಪಂಕ್ತಿ ಬಾಹಿರರೆಂದೂ ವರ್ಣಿಸಲ್ಪಟ್ಟರು. ವಿಚಿತ್ರವೆಂದರೆ ವ್ಯಭಿಚಾರ ಮೊದಲಾದ ದೋಷಗಳೇನಾದರೂ ಕಾಣಿಸಿದಲ್ಲಿ ಅವು ಅಲ್ಲಿ ನಿಯತವಾಗಿ ಇರು ವಂತಹವೇ ಆದ್ದರಿಂದ ಪಟ್ಟುಹಿಡಿದು ನಿಂದಿಸುವು ದಾಗಲೀ,ವ್ಯಂಗ್ಯವಾಗಿ ಗುರುತಿಸಿ ಹೀಯಾಳಿಸುವು ದಾಗಲೀ ಅನವಸರವೆಂದು ಭಾವಿಸಿ ಸಮಾಜ ಬಹಿಷ್ಕಾರವೇ ಅದಕ್ಕೆ ತಕ್ಕ ಉಪಾಯ ಎಂದು ತಿಳಿದಂತೆ ಕಂಡು ಬರುತ್ತದೆ. ಧರ್ಮಶಾಸ್ತ್ರ ಗಳಾಗಲೀ, ಶಿಕ್ಷಾಸ್ಮೃತಿಗಳಾಗಲೀ ನಟರ ಈ ದೋಷಗಳಿಗೆ ಹಿರಿದಾಗಿ ಶಿಕ್ಷೆ ವಿಧಿಸದಾದರು.

ಬೌದ್ಧ ಜೈನ ವಾಙ್ಮಯಗಳಲ್ಲಿ ನಟರೇ ಅಲ್ಲ ನಾಟ್ಯವೂ ಸಹ ದೂಷ್ಯವೆಂದೇ ಗುರುತಿಸಲ್ಪಟ್ಟಿದೆ. ನಾಟಕ ನೋಡಿದರೆ ತಪ್ಪು, ನಟರೊಡನೆ ಮಾತ ನಾಡಿದರೆ ಅಪಚಾರ. ನರ್ತಕಿಯೊಡನೆ ಮಾತನಾ ಡಿದರಂತೂ ಮತ್ತೂ ಹಿರಿಯ ಅನ್ಯಾಯ. ವಿನಯ ಪಿಟಕದಲ್ಲಿ ಒಂದೆಡೆ ಇಂತಹ ದೋಷಗಳಿಗಾಗಿ, ಅಶ್ವಜಿತ್, ಪುನರ್ವಸು ಎಂಬ ಭಿಕ್ಷುಗಳಿಗೆ ಪ್ರಪ್ರ ಜನೀಯ ದಂಡ ವಿಧಿಸಿದಂತೆ ತಿಳಿಸಲಾಗಿದೆ. ಜೈನ ಕಲ್ಪಸೂತ್ರಗಳಲ್ಲಿನ ಕಥೆ ಮತ್ತೂ ವಿಚಿತ್ರ. ನಟರ ನಾಟಕವನ್ನು ನೋಡಬಾರದು ಎಂಬ ಸಿದ್ಧಾಂತ ವನ್ನು ಅಕ್ಷರಶಃ ಪಾಲಿಸಿದ ಒಬ್ಬ ಪ್ರೌಢ ಶ್ರಮ ಣನು ನಟಿಯರ ನಾಟಕವನ್ನು ನೋಡಿಬಂದು ತಾನು ನಿರ್ದೋಷಿಯೆಂದು ವಾದಿಸಿದನಂತೆ. ಈ ಕಥೆಗಳಿಂದಾಗಿ ಅಂದೂ ನಮ್ಮ ದೇಶದಲ್ಲಿ ನಟ ನಟಿಯರು, ನಾಟ್ಯಸಂಘಗಳು, ತದ್ವಿಲಾಸ ವಿಹಾ ರಗಳು, ತತ್ಸಂಬಂಧಿ ವಿಭಿನ್ನತೆಗಳೂ, ಇದ್ದವೆಂದು ತಿಳಿದು ಬರುತ್ತದೆ. ಇಷ್ಟೇ ಅಲ್ಲ; ಸರಗುಜಾ ರಾಜ್ಯದಲ್ಲಿನ ರಾಮಘಡ ಬೆಟ್ಟಗಳಲ್ಲಿ ಸಭಾಭವನ ವಿಶ್ರಾಂತಿಭವನಗಳು ಕಲ್ಲಿನಲ್ಲಿ ನಿರ್ಮಿಸಲ್ಪಟ್ಟವು. ಆಗಣ ಶಿಲಾಶಾಸನ (ಕ್ರಿ.ಪೂ. 320) ದಂತೆ ಅದು ಸುತನುಕಾ ಎಂಬ ನರ್ತಕಿಯಿಂದ ನಿರ್ಮಾ ಣವಾಯಿತೆಂದು ತಿಳಿದು ಬರುತ್ತದೆ. ಹೀಗೆ ತಮಗೆ ಬೇಕಾದ ಸದುಪಾಯಗಳನ್ನು ಸ್ವತಃ ನಟರು ಮಾಡಿಕೊಳ್ಳುತ್ತಿದ್ದದಷ್ಟೇ ಅಲ್ಲ, ರಾಜರೂ ಇಂತಹ ಸದುಪಾಯಗಳನ್ನು ಒದಗಿಸುತ್ತಿದ್ದರು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಗೀತ, ವಾದನ, ನೃತ್ಯಗಳನ್ನು ಪೋಷಿಸಿ ಆದರಿಸುವ ಕರ್ತವ್ಯ ಪ್ರಭುತ್ವದ್ದು ಎಂದು ಸ್ಪಷ್ಟವಾಗಿ ಹೇಳಿದೆ. ಅದೇ ಅರ್ಥಶಾಸ್ತ್ರದಲ್ಲಿ "ಶೂದ್ರಸ್ಯ ದ್ವಿಜಾತಿ ಶುಶ್ರೂಷಾ ವಾರ್ತಾಕಾರು ಕುಶೀಲವ ಕರ್ಮಚ" ಎನ್ನುತ್ತ ನಟರನ್ನು ಶೂದ್ರರೆಂದು ಹೆಸರಿಸಿರುವುದೂ ಉಂಟು. ಆದರೆ ಆ ಬಗ್ಗೆ ಅವರೇನು ಯೋಚಿಸಿದಂತಿಲ್ಲ. ಪತಂಜ ಲಿಯ ಕಾಲಕ್ಕೆ (ಕ್ರಿ. ಪೂ. 150) ಶೈಲೂಷರು, ಶೋಭನಕರು, ಕುಶೀಲವರು ಮೊದಲಾದವರೆಲ್ಲ ನಾಟ್ಯವನ್ನು ಉಪಜೀವನವನ್ನಾಗಿ ಗ್ರಹಿಸಿ ದೇಶದ ನಾಲ್ಕು ಮೂಲೆಗಳಲ್ಲೂ ವ್ಯಾಪಿಸಿದ್ದಂತೆ ಕಂಡು ಬರುತ್ತದೆ.

ಹೆಚ್ಚು ಕಡಮೆ ಇದೇ ಕಾಲದಲ್ಲಿ ಎಂದರೆ ಕ್ರಿ. ಶ.ದ ಆರಂಭಕ್ಕೆ 200 ವರ್ಷ ಮೊದಲು ಭರ ತನ ನಾಟ್ಯಶಾಸ್ತ್ರ ಪ್ರಕಟವಾಯಿತು. ಅಂದಿನ ಕಲಾನೈಪುಣ್ಯವೆಲ್ಲ ಇದರಲ್ಲಿ ಸಂಗ್ರಹಿಸಲ್ಪಟ್ಟಿದೆ. ನಾಟ್ಯಕ್ಕೆ ಸಂಬಂಧಿಸಿದ ಗೀತ, ವಾದ್ಯಗಳ ಬಗ್ಗೆಯೂ ಸವಿಸ್ತರವಾಗಿ ಬರೆಯಲಾಗಿದೆ. ನಾಟ್ಯ ಮಂದಿರ ನಿರ್ಮಾಣದಿಂದ ಹಿಡಿದು ನಟರ ವೇಷ ಭೂಷಣಗಳ ರೀತಿ, ವಿವಿಧ ಪ್ರಾಂತಗಳ ಭಾಷಾ ವ್ಯವಹಾರದ ರೀತಿ, ನಟರಿಗೆ ಅಗತ್ಯವಾದ ಆಚಾರ ವ್ಯವಹಾರಗಳನ್ನೆಲ್ಲ ವಿವರಿಸಲಾಗಿದೆ. ಅಂದು ದೇಶದಲ್ಲಿ ಪ್ರಚಲಿತವಿದ್ದ ಔಢ್ರ, ಮಾಗಧ ಅವಂತಿ, ದಾಕ್ಷಿಣಾತ್ಯ ಮೊದಲಾದ ಪ್ರಾದೇಶಿಕ ವಿಭೇದಗಳನ್ನೂ ಗುರುತಿಸಲಾಗಿದೆ. ಅಂಗಪ್ರತ್ಯಂ ಗಾದಿಗಳಲ್ಲಾಗಲೀ ಹಸ್ತ ಸಾಮುದ್ರಿಕದಲ್ಲಾಗಲೀ ಚಿತ್ರವಿಚಿತ್ರಾಭಿನಯದಲ್ಲಾಗಲೀ, ರಸವಿಷಯ ದಲ್ಲಾಗಲೀ, ಎಚ್ಚರವಹಿಸಿ, ಸೂಕ್ಷ್ಮಾತಿಸೂಕ್ಷ್ಮ ಪ್ರಭೇದಗಳನ್ನು ಗುರುತಿಸಿ ಅವುಗಳ ಪ್ರಯೋಗ ವಿನಿಯೋಗಗಳನ್ನು ವಿವರಿಸಿ, ಇಂತಹ ಗ್ರಂಥ 'ನಭೂತೋ ನಭವಿಷ್ಯತಿ' ಯಾಗಿ ಈ ಶಾಸ್ತ್ರ ರಚ ನೆಯಾಯಿತು. ಆ ನಂತರ ಈವಿಷಯದಲ್ಲಿ ಬಂದ ಕೃತಿಗಳೆಲ್ಲವೂ ಭರತನಿಗೆ ಋಣಿಯಾದಂತಹವೇ. ಯಾರು ಹೇಳಿದರೂ ಭರತನಂತೆಯೇ. ಏನು ಹೇಳಿದರೂ ಭರತವೇ. ಅರ್ಜುನಭರತ, ನಂದಿಕೇ ಶ್ವರ ಭರತ, ನಾರದಭರತ, ಹನುಮದ್ಭರತ, ಜೈಮಿನಿಭರತ, ಹೀಗೆ ಹಲವಾರು. ನೃತ್ಯಗೀತೆಗಳೇ ಭರತ ವೆಂದೂ ಅವುಗಳನ್ನು ಕಲಿತವರು ಭರತರು ಎಂದೂ ಹೇಳಬೇಕು. ಇವೆಲ್ಲವನ್ನೂ ಕಂಡ ಸಂ ಕಲ್ಪ ಸೂರ್ಯೋದಯದ ಕರ್ತೃ ವೇದಾಂತ ದೇಶಿ ಕರು ತಮ್ಮ ಭರತ ಶಬ್ದ ಪ್ರತ್ಯೇಕವಾಗಿ ಯಾವ ವ್ಯಕ್ತಿಗೂ, ಕಾಲಕ್ಕೂ ಅನ್ವಯಿಸಿದ್ದಲ್ಲವೆಂದರು. ಭಾವ ರಾಗ ತಾಗಳೆಂಬ ಶಬ್ದಗಳ ಪ್ರಥಮಾಕ್ಷರ ಗಳನ್ನು ಜೋಡಿಸಿ ನೃತ್ಯ, ಗೀತ, ವಾದ್ಯ ಮೊದ ಲಾದ ವಿದ್ಯೆಗಳಿಗೆ ಪರ್ಯಾಯವಾಗಿ ಭರತ ಶಬ್ದ ವನ್ನು ಆಚರಣೆಗೆ ತಂದರು ಎಂಬುದು ಅವರ ಅಭಿ ಪ್ರಾಯ. ಮೂಲಭೂತವಾಗಿ ನಾಟ್ಯಶಾಸ್ತ್ರವೂ ಸಹ ಒಬ್ಬ ಕರ್ತೃವಿನಿಂದಾದದ್ದೆಂದು ತೋರಿ ಬರದು. ಬರೆದ ವಿಷಯಗಳಲ್ಲಿ ಒಂದು ಕ್ರಮವೂ ಕಂಡ ಬರದು. ಅಗತ್ಯ ವಿಷಯಗಳೊಂದಿಗೆ ಅನ ಗತ್ಯವಾದ ಛಂದಸ್ಸು, ಅಲಂಕಾರಗಳ ಪ್ರಶಂಸೆ ಯೂ ಸಹ ಇದರಲ್ಲಿ ಕಂಡು ಬರುತ್ತದೆ. ಇಷ್ಟೆಲ್ಲ ನೋಡಿದರೆ ಜಾಗೀರ್ದಾರ್ ಅವರು ಹೇಳುವಂತೆ ಇದು ಕೇವಲ ಭರತರ ಅಥವಾ ನಟರ ಪ್ರಯೋಜ ನಾರ್ಥ ಬೇರೆ ಬೇರೆ ವಿಷಯಗಳನ್ನೆಲ್ಲ ಒಂದೆಡೆ ಜೋಡಿಸಿದ್ದರಿಂದಾದ ಬೃಹದ್ಗ್ರಂಥವೆಂದು ಅನ್ನಿ ಸುತ್ತದೆ. ಏನೇ ಆದರೂ ಶಾಸ್ತ್ರ ವಿಷಯದಲ್ಲಿ ಈ ಕೃತಿಯನ್ನು ಮೀರಿದ್ದು ಮತ್ತೊಂದಿಲ್ಲವೆನ್ನುವುದು ನಿರ್ವಿವಾದ. ನಾಟ್ಯಕ್ಕೆ ನೀತಿ ನಿಯಮಗಳನ್ನು ವಿಧಿಸಿ, ಶಾಸ್ತ್ರೀಯತೆಯನ್ನು ಸಂಪಾದಿಸಿಕೊಟ್ಟ ಕೀರ್ತಿ ಈ ಕೃತಿಗೆ ದೊರೆತಷ್ಟು ಬೇರಾವುದಕ್ಕೂ ದೊರೆಯದು. ಪ್ರಾವೀಣ್ಯತೆಯಲ್ಲಿ ಇದು ನಾಟ್ಯಕ್ಕೆ ವೇದವೇ ಹೌದು.

ಕ್ರಿಸ್ತಶಕದಾರಂಭದಲ್ಲೇ ಅಶ್ವಘೋಷ ಭಾಸ ಮೊದಲಾದವರ ನಾಟಕಗಳು ಬರೆಯಲ್ಪಟ್ಟಂತೆ ಚರಿತ್ರೆಕಾರರು ಅಭಿಪ್ರಾಯ ಪಡುತ್ತಾರೆ. ಅಶ್ವ ಘೋಷನ ನಾಟಕ ಪೂರ್ತಿಯಾಗಿ ದೊರೆತಿಲ್ಲ. ಆದರೆ ಅತನ ಚರಿತ್ರೆ ಆಮ್ರಪಾಲಿ ಎನ್ನುವ ನರ್ತ



ಕಿಯ ಜೀವನದೊಡನೆ ಘನಿಷ್ಠ ಸಂಬಂಧ ಹೊಂದಿದಂತೆ ಕಂಡು ಬರುತ್ತದೆ. ಭಾಸನ ಪ್ರತಿಮಾ ನಾಟಕದಲ್ಲಿ ರಾಮಪಟ್ಟಾಭಿಷೇಕದ ಉತ್ಸವಗಳಲ್ಲಿ ನಟಿಸಲು ನಟರನ್ನು ಕರೆದಂತೆ ಬರೆಯಲಾಗಿದೆ. ಈತನ ಬಾಲಚರಿತ್ರೆಯಲ್ಲೂ ನೃತ್ಯ ಗೀತಾದಿಗಳ ಪ್ರಶಂಸೆ ಕೇಳಿ ಬರುತ್ತದೆ. ನಂತರ ಕಾಳಿದಾಸನ ವರೆಗೆ ಮಧ್ಯಕಾಲದ ಯಾವ ನಾಟಕವೂ ನಮಗೆ ದೊರೆತಿಲ್ಲ. ಕಾಳಿದಾಸನ ಕಾಲಕ್ಕೆ ದೇಶದಲ್ಲಿ ಎಲ್ಲ ಕಲೆಗಳೂ ಉಚ್ಛ ದೆಸೆಯಲ್ಲಿದ್ದಂತೆ ಕಂಡು ಬರುತ್ತದೆ. ಈತನ ಮಾಳವಿಕಾಗ್ನಿಮಿತ್ರದಲ್ಲಿ ನಾಟ್ಯಪ್ರಶಂಸೆಯಷ್ಟೇ ಅಲ್ಲ, ನಾಟ್ಯಪರೀಕ್ಷೆಯೂ ವರ್ಣಿಸಲ್ಪಟ್ಟಿದೆ. ವಿಕ್ರಮೋರ್ವಶೀಯದ ನಾಲ್ಕನೆ ಅಂಕ ಕೇವಲ ನೃತ್ಯಗೀತೆಗಳ ಪ್ರದರ್ಶನಕ್ಕೆಂದೇ ಬರೆಯಲ್ಪಟ್ಟಿದ್ದಂತಿದೆ. ಹರ್ಷನ ನಾಟಕಗಳಲ್ಲಿ ಅಂದಿನ ಉಚ್ಛವರ್ಗದ ತರುಣತರುಣಿಯರೂ ನೃತ್ಯ ಗೀತೆಗಳನ್ನು ತಿಳಿದವರಂತೆ ವರ್ಣಿಸಲಾಗಿದೆ. ಈತನ ರತ್ನಾವಳಿಯಲ್ಲಿ ದ್ವಿಪದ ಖಂಡ, ಚರ್ಚರಿ – ಮೊದಲಾದ ಹಲವು ಗೀತ ಖಂಡಗಳೂ ಕಾಣಿಸುತ್ತವೆ. ಆದರೆ ಇತರ ಸಂಸ್ಕೃತ ನಾಟಕಗಳಲ್ಲಿ ಎಲ್ಲೂ ನೃತ್ಯವು ಅವಶ್ಯಪ್ರದರ್ಶನೀಯ ವೆಂದು ಏರ್ಪಾಡು ಮಾಡಿದಂತೆ ತಿಳಿದು ಬರದು. ನೃತ್ಯವೇ ಬೇರೆ, ನಾಟಕವೇ ಬೇರೆ, ಹೀಗೆ ಪ್ರತ್ಯೇಕವಾಗಿ ಅಭಿವೃದ್ಧಿ ಹೊಂದಿದಂತೆ ಕಂಡುಬರುತ್ತದೆ. ಆದರೂ ನಾಟಕಗಳಲ್ಲಿಯಂತೆಯೇ ಕ್ರಿಸ್ತಶಕಾರಂಭದಿಂದ 7ನೇ ಶತಕದವರಿಗೆ ಬರೆಯಲಾದ ಯಾವ ಗ್ರಂಥಗಳನ್ನು ನೋಡಿದರೂ, ಆಯಾ ಕಾಲದ ನೃತ್ಯಗೀತೆಗಳನ್ನು ಕುರಿತು ಪ್ರಸ್ತಾವನೆ ಪ್ರತ್ಯೇಕವಾಗಿ ದೊರೆಯುತ್ತವೆ. ಪುರಾಣಗಳಲ್ಲೆಲ್ಲ ನೃತ್ಯಗೀತಾದಿಗಳು ಪ್ರಶಂಸಿಸಲ್ಪಟ್ಟಿವೆ. ಪುರಾಣಗಳಲ್ಲಿ ಇವುಗಳಿಗೆ ಸಂಬಂಧಿಸಿದ ಶಾಸ್ತ್ರೀಯ ವಿಷಯಗಳು ಕೂಡ ಕ್ಲುಪ್ತವಾಗಿ ಬರೆಯಲ್ಪಟ್ಟಿವೆ. ವಿಷ್ಣುಧರ್ಮೋತ್ತರ ಪುರಾಣದಲ್ಲಿ ನಾಟ್ಯವನ್ನು ಕುರಿತು ವಿಶೇಷವಾಗಿ ಬರೆಯಲಾಗಿದೆ.

8ನೇಯ ಶತಕದಿಂದ ಉತ್ತರ ಹಿಂದೂಸ್ಥಾನದಲ್ಲಿ ರಾಜಕೀಯ ವಾತಾವರಣ ಪ್ರಶಾಂತವಾಗಿ ಇಲ್ಲದಿದ್ದುದರಿಂದ ನೃತ್ಯ ಗೀತೆಗಳ ಸ್ಥಿತಿಯೂ ಸಹ ಅಭಿವೃದ್ಧಿ ಹೊಂದದೆ ಆದರದಿಂದ ದೂರವಾಗಿ ಬದುಕಿ ಕೆಟ್ಟ ಮನುಷ್ಯನಂತಾಯಿತು. ಏಕಚಕ್ರಾಧಿಪತ್ಯ ನಾಶವಾಗಿ ಕಿರು ಗೊಡೆಗಳು ನಾಯಿಕೊಡೆಗಳು ತಲೆಯೆತ್ತುವಲ್ಲಿ "ತಾಳೆಯ ನೆರಳು ತನಗೂ ಇಲ್ಲ ಪರರಿಗೂ ಇಲ್ಲ'' ಎಂಬಂತೆ ಅವುಗಳನ್ನಾಗಲೀ ಅವುಗಳನ್ನಾಶ್ರಯಿಸಿ ಬದುಕುವ ನೃತ್ಯಗೀತೆಗಳಿಗಾಗಲೀ ಸ್ಥಿರತೆ ಬರದೆ ಹೋಯಿತು. ಆ ನಂತರ ಸಂಕೋಲೆಯಂತೆ ನಡೆದ ಮಹಮದೀಯರ ದಂಡೆಯಾತ್ರೆಗಳಿಂದಾಗಿ ಸ್ಥಿತಿ ಮತ್ತೂ ಕೆಳಜಾರಿತು. ಆಶ್ರಯದಾತರಾದ ರಾಜರೇ ಅಲ್ಲದೆ ಅಂದಿನ ಪ್ರಜೆಗಳೂ ಪ್ರಾಣವನ್ನು ಅಂಗೈಯಲ್ಲಿ ಹಿಡಿದು ಬದುಕುವ ಪರಿಸ್ಥಿತಿ. ಇಂತಲ್ಲಿ ವಿಲಾಸಕ್ಕೆಲ್ಲಿ ಎಡೆ? ಭಯಾರ್ತರಿಗೆ ಭಕ್ತಿ ರುಚಿಸಿದಷ್ಟು ಮತ್ತಾವುದೂ ರುಚಿಸದು. ಆದದ್ದೂ ಸಹ ಅದೇ. ಅನೇಕ ಭಕ್ತಿ ಸಂಪ್ರದಾಯಗಳು ತಲೆಯೆತ್ತಿದವು. ಆರ್ತತ್ರಾಣಪರಾಯಣನಾದ ಸಗುಣ ಪರಮಾತ್ಮನೇ ಭಕ್ತಿಗೆ ಆಲಂಬನವಾಗಿ ನಿಂತ. ಭಕ್ತಿಯಲ್ಲಿ ದಾಸ್ಯ, ಸಖ್ಯ, ವಾತ್ಸಲ್ಯ, ಶೃಂಗಾರಾದಿ ಭಾವಗಳೆನಿತೋ ವಿಕಾಸವಾದವು. ಜಯದೇವನ ಗೀತಗೋವಿಂದ ದಿಂದ ಈ ಶೃಂಗಾರ ಭಕ್ತಿಯಲ್ಲಿ ನೃತ್ಯಗೀತೆಗಳಿಗೆ ಮತ್ತೆ ಸ್ಥಾನ ದೊರೆಯಿತು. ಆ ಮೊದಲು ಭಕ್ತರು ತನ್ಮಯರಾಗಿ ಹಾಡಿ ಆಡ ತೊಡಗಿದರು. ಆದರೆ ಭಕ್ತಿಯ ಮೇಲೆ ಒತ್ತು ಹೆಚ್ಚಾಗಿದ್ದುದರಿಂದ ನೃತ್ಯಗಾನಗಳಿಗೆ ಶಾಸ್ತ್ರೀಯತೆ ಹಿಡಿತ ಸಡಿಲಹೊಂದಿ ಸ್ವಚ್ಛಂದತೆ ಹೆಚ್ಚಿತು. ಅಂದಿನಕಾಲದಲ್ಲಿ ದೇಶದಲ್ಲಿ ಸ್ಥಿರವಾದ ಮುಸ್ಲಿಂ ದರ್ಬಾರುಗಳಲ್ಲಿನ ರಾಜಾಶ್ರಯವನ್ನು ಅಪೇಕ್ಷಿಸಿದ ನೃತ್ಯ ತದಭಿರುಚಿಗನುಗುಣವಾಗಿ ಮತ್ತೂ ಸ್ವತಂತ್ರವಾಗಿ ಕೊನೆಗೆ ಸಂಕರವಾಗಿ ತಮ್ಮ ಮೂಲರೂಪರೇಖೆಯನ್ನು ಮರೆತು ಹೋಗುವ ಸ್ಥಿತಿಗೆ ಬಂದು ಮತಾಂತರಗೊಂಡವು. ಆದರೆ ದಕ್ಷಿಣ ಭಾರತದಲ್ಲಿ ಇಂತಹ ಗೊಂದಲಕರ ವಾತಾವರಣವಿಲ್ಲದ್ದರಿಂದ ಇಲ್ಲಿ ಮಾತ್ರ ಈ ಕಲೆಗಳು ತಮ್ಮ ಪ್ರಾಚೀನ ರೂಪವನ್ನು ಗಟ್ಟಿಗೊಳಿಸಿಕೊಳ್ಳುತ್ತ ನಡೆದವು.

———

(14 ನೇ ಪುಟದಿಂದ)

ಭವಿಸುವುದು. ಸಾರೂಪ್ಯವೆಂದರೆ ಪರಮಾತ್ಮನಂತೆ ಚತುರ್ಭುಜ ಶಂಖ ಚಕ್ರಾದಿಗಳನ್ನು ಧರಿಸಿ ಅಪರಿಮಿತ ಭೋಗವನ್ನನುಭವಿಸುವದು. ಸಾಯುಜ್ಯವೆಂದರೆ ಪರಮಾತ್ಮನ ದಿವ್ಯ ಶರೀರದಲ್ಲಿ ಸೇರಿ ಯಥೇಷ್ಟ ಭೋಗ ಅನುಭವಿಸುವದು.

ಮಧ್ವಾಚಾರ್ಯರು ಎಲ್ಲೆಡೆ ಸಂಚಾರ ಮಾಡಿ ಎಲ್ಲ ಜನರಿಗೂ ಚಿರಪರಿಚಿತರಾದರು. ಜನರ ಉದ್ಧಾರವೇ ಜನಾರ್ಧನನ ಸೇವೆ ಎಂದು ನಂಬಿ ನೀತಿ ಶ್ರದ್ಧೆ ಧರ್ಮದ ಆಧಾರದ ಮೇಲೆ ದರ್ಶನ ಪ್ರಚಾರ ಮಾಡಿದರು.

ಮಧ್ವಾಚಾರ್ಯರು 79 ವರ್ಷಗಳ ಕಾಲ ಬಾಳಿ ಸರ್ವತ್ರ ವಾದಗಳಲ್ಲಿ ಜಯಗಳಿಸಿದರು. ತಮಗೆ ಪ್ರಿಯವಾದ ಐತರೇಯೋಪನಿಷತ್ತಿನ ರಹಸ್ಯಗಳನ್ನು ಶಿಷ್ಯರಿಗೆ ತಿಳಿಸುತ್ತಿದ್ದಾಗಲೇ ಅವರ ಮೇಲೆ ಪುಷ್ಪವೃಷ್ಟಿಯಾಯಿತೆಂದೂ ಆಗಲೇ ಅವರು ಅದೃಶ್ಯರಾದರೆಂದು ಹೇಳುತ್ತಾರೆ. ಆಚಾರ್ಯರು ಅದೃಶ್ಯರಾದ ಮಾಘಶುದ್ಧ ನವಮಿ ದಿನವನ್ನು 'ಮಧ್ವನವಮಿ' ಎಂದು ನಾವು ಇಂದಿಗೂ ಭಕ್ತಿಯಿಂದ ಆಚರಿಸುತ್ತೇವೆ. ವೈಷ್ಣವರಿಗೆ ಇದೊಂದು ಪುಣ್ಯದಿನ.

ಮಧ್ವಾಚಾರ್ಯರು ತಮ್ಮ ಅಪಾರ ಗ್ರಂಥ ರಚನೆಯಿಂದ, ವಿಶಾಲ ದೃಷ್ಟಿಯಿಂದ ದರ್ಶನ ಸ್ಥಾಪಕರಾಗಿ; ಧರ್ಮ ಪ್ರಚಾರಕರಾಗಿ ಮಹೋಪಕಾರ ಮಾಡಿದ್ದಾರೆ. ಅವರ ಉಪದೇಶದಲ್ಲಿ ಒಂದಿಷ್ಟನ್ನಾದರೂ ನಾವು ಆಚರಿಸಿದರೆ ಜೀವನ ಸಾರ್ಥಕವಾಗುವುದು. ಅವರ ಸಿದ್ಧಾಂತವನ್ನು ಅನುಷ್ಠಾನದಲ್ಲಿ ತಂದರೆ ಮುಕ್ತಿ ದೊರೆತು – ಶಾಶ್ವತ ಸುಖ ಉಂಟಾಗುವುದು. ★

---

(16ನೇ ಪುಟದಿಂದ)

ಹರಿಕುಶಲಜಾನಕಿಗೆ ತಿಳಿಸಬೇಕು । ವನವ
ಕೀಳಲು ಬೇಕು ।
ಚೂಡಾಮಣಿಯ ತರಲು ಬೇಕು । ಹರಿ
ಹರುಷದಿಂದಲಿ ಖ್ಯಾತಿಯ ಪಡೆಯಬೇಕು ।
ಕುರುಕುಲದಲಿ ಕುಂತಿಸುತನಾಗಿ ಜನಿಸಲು
ಬೇಕು ।
ರಣದಲಿ ಕೌರವರ ಗೆಲಿಯಬೇಕು । ವನ
ದೊಳಗೆ
ಘನತೃಷೆಯ ಗಾಸಿಪಡಿಸಲು ಬೇಕು । ಮಡದಿಗೆ
ಸೌಗಂಧಿಕವ ತರಲು ಬೇಕು ।
ಯತಿಯಾಗಿ ಬರಬೇಕು । ಕುಮತವ
ಖಂಡಿಸಬೇಕು ।
ಅದ್ಭುತವಾದಿಗಳ ಗೆಲಿಯಬೇಕು ।
ಮಧ್ವಶಾಸ್ತ್ರವ ಲೋಕಕೆ ನಿರ್ಣಯ
ಮಾಡಲು ಬೇಕು ।
ಮುದ್ದು ಪುರಂದರವಿಠಲನ ದಾಸನೆಂದೆನಿಸ
ಬೇಕು ॥

ಹೀಗೆ ಪ್ರತಿ ಸಂದರ್ಭದಲ್ಲೂ ವಾಯುದೇವರ ಅವತಾರತ್ರಯ ರೂಪರಾದ ಶ್ರೀ ಹನುಮ, ಭೀಮ, ಮಧ್ವರನ್ನು ನಮ್ಮ ಹರಿದಾಸರು ತಮ್ಮ ಪದ್ಯಗಳಲ್ಲಿ ಮನಸಾರೆ ಕೊಂಡಾಡಿ ದಾಸಸಾಹಿತ್ಯದ ಮೇಲ್ಮೆಯನ್ನು ಊರ್ಜಿತಗೊಳಿಸಿದ್ದಾರೆ.

———

ಯುವವಾಣಿ

ಹಿಂದೂ ಸಾಮ್ರಾಟನ ಗುರು

# ಸಮರ್ಥ ರಾಮದಾಸರು

ವಿದ್ವಾನ್ ಬ.ನ. ಗುಂಡೂರಾವ್

ತರಂಗಮಂಗಳೆಯಾದ ಗೋದಾವರಿ ತುಂಬು ಗಾಂಭೀರ್ಯದಿಂದ ಪ್ರವಹಿಸುತ್ತಿದ್ದಾಳೆ. ಎಷ್ಟೇ ಆದರೂ ರಾಮಪಾದಸ್ಪರ್ಶದಿಂದ ಪಾವನವಾದ ಪ್ರದೇಶ. ಸೀತಾವಿಯೋಗ ವಿಹ್ವಲಿತಾಂತರಂಗನಾದ ಶ್ರೀರಾಮಚಂದ್ರನ ಕಂಬನಿಯ ಹನಿಗಳು ಗೋದಾವರಿಯಲ್ಲಿ ಬಿದ್ದಿರಬಾರದೇಕೆ? ಈ ಸ್ರೋತಸ್ವಿನಿಯ ಸೌಂದರ್ಯವನ್ನು ಕಂಡು ತ್ರೇತಾಯುಗದ ರಾಮ ಸೀತೆಯರು ತುಂಬ ಹರ್ಷಪಟ್ಟಿರಬೇಕು. ಸೀತಾದ್ವಿತೀಯನಾಗಿ ದಾಶರಥಿ ಅದೆಷ್ಟು ಸುಂದರ ಸಂಧ್ಯೆಗಳನ್ನು ಈ ಪ್ರದೇಶದಲ್ಲಿ ಕಳೆದಿದ್ದನೋ! ವನವಾಸದವಧಿಯಲ್ಲಿ ವಾಸಕ್ಕಾಗಿ, ಪರ್ಣಕುಟೀರವನ್ನು ನಿರ್ಮಿಸಿದ ಸೌಮಿತ್ರಿಯ ಕೌಶಲವನ್ನು ಕಂಡು ಮೆಚ್ಚಿ ಮೆಚ್ಚಿ ಮಾತಾಡಿದ ರಾಮ ಸೀತೆಯರ ಮಂಗಳ ಮಂದಹಾಸವನ್ನು ಕಂಡ ಗೋದಾವರಿ ತಾನೂ ಹಿಗ್ಗಿ ಹೋಗಿರಬೇಕು. ಕಾಣುವ ಕಣ್ಣು, ಕೇಳುವ ಕಿವಿಯೂ ಇದ್ದರೆ ನದಿಗಳೂ ಸಹ ಜಗದ ಇತಿಹಾಸ – ಹೇಳುವುವಂತೆ; ಬೆಟ್ಟಗಳೂ ಸಹ ಯುಗದ ಇತಿಹಾಸ ಹೇಳುವುವಂತೆ. ಈ ಮಾತನ್ನು ಸಂಪೂರ್ಣವಾಗಿ ಅಲ್ಲಗಳೆಯುವಂತಿಲ್ಲ. ಒಂದು ರಾಷ್ಟ್ರದ ಉತ್ಥಾನಪತನಗಳಿಗೆ ಮೂಕ ಸಾಕ್ಷಿಯಂತೆ ಅಲ್ಲಿನ ನದಿ ಬೆಟ್ಟಗಳೂ ಸಹ ತಮ್ಮದೇ ಬಾಷೆಯಲ್ಲಿ ಏನೇನೋ ಹೇಳುತ್ತವೆ. ಹೀಗೆಲ್ಲ ಯೋಚನೆ ಮಾಡುತ್ತ ನದಿಯ ದಡದ ಆ ಮಳಲ ಹಾಸಿನಲ್ಲಿ ಒಬ್ಬಾತ ಗಂಭೀರವಾಗಿ ಕುಳಿತಿದ್ದಾನೆ. ಆಜಾನುಬಾಹುವಾದ ಆ ವ್ಯಕ್ತಿ ಉಕ್ಕಿನಮನುಷ್ಯನಂತೆ ಕಾಣುತ್ತಾನೆ. ಆ ಕಣ್ಣುಗಳಲ್ಲಿ ತೇಜಸ್ಸು ತುಂಬಿರುವಂತೆ, ಕರುಣೆಯೂ ತುಳುಕುತ್ತಿದೆ. ಗೋದಾವರಿ ಮತ್ತು ನಂದಿನಿ ನದಿಗಳು ಅಕ್ಕತಂಗಿಯರಂತೆ ಅನತಿದೂರದಲ್ಲಿ ಚಕ್ಕಂದವಾಡುತ್ತಿರುವುದನ್ನು ನೋಡುತ್ತ ನೋಡುತ್ತ ಆ ಸನ್ಯಾಸಿ ಹಾಗೇ ಕ್ಷಣಕಾಲ ಕಣ್ಮುಚ್ಚಿದ. ಆ ಜೀವ ಅಂತರಂಗದಲ್ಲಿ ಅದಾವ ದಿವ್ಯ ಅನುಭವ ಪಡೆಯಿತೋ!! ಅದಾವ ಭವ್ಯ ದರ್ಶನ ಕಂಡಿತೋ!! ಅಷ್ಟರಲ್ಲಿ ಒಬ್ಬಾಕೆ ಬಂದು ಆ ಮಹಾತ್ಮನ ಮುಂದೆ ದೀರ್ಘದಂಡ ನಮಸ್ಕಾರ ಹಾಕಿದಳು. ಧೀರ ಸನ್ಯಾಸಿ ಕಣ್ಣು ಮುಚ್ಚಿ ಕೊಂಡೇ ಆಶೀರ್ವದಿಸಿದ–

ದೀರ್ಘಸುಮಂಗಲೀ ಭವ!!
ಅಷ್ಟಪುತ್ರವತೀ ಭವ!!

"ತಮ್ಮ ಈ ಆಶೀರ್ವಾದ ಫಲಿಸುವುದು ಈ ಜನ್ಮದಲ್ಲೋ ಅಥವ ಮುಂದಿನ ಜನ್ಮದಲ್ಲೋ"

ಆಕೆ ಧೈರ್ಯಮಾಡಿ ಗದ್ಗದ ಕಂಠದಿಂದ ಪ್ರಶ್ನೆ ಮಾಡಿದಳು; ಆಗ ಆತ ಕಣ್ಣು ಬಿಟ್ಟು ನೋಡಿ.

"ಯಾರು ತಾಯಿ ನೀನು"–ಎಂದ ಮಾತಿನಲ್ಲಿ ಮರುಕ ತುಂಬಿತ್ತು.

"ನಾನೊಬ್ಬ ಅನಾಥೆ – ನಿರ್ಭಾಗ್ಯೆ. ಮೃತನಾದ ನನ್ನ ಗಂಡನನ್ನು ಬಂಧು ಬಾಂಧವರು ಸ್ಮಶಾನಕ್ಕೆ ತೆಗೆದುಕೊಂಡು ಹೋಗುತ್ತಿದ್ದಾರೆ. ನಾನು ಸಹ ಸಹಗಮನಕ್ಕೆ ಸಂಕಲ್ಪಮಾಡಿದ್ದೇನೆ. ಬಾಳಿನ ಈ ಕೊನೆಯ ಕ್ಷಣದಲ್ಲಿ ಮಹಾತ್ಮರಾದ ತಮ್ಮ ದರ್ಶನ ಭಾಗ್ಯ ದೊರೆಯಿತು. ನಮಸ್ಕರಿಸಿ ಹೋಗೋಣವೆಂದು ಬಂದೆ –

ಆಕೆ ದುಃಖವನ್ನು ತಡೆ ತಡೆದು ಹೇಳಿದಳು.

"ಇದಕ್ಕೇಕೆ ಅಷ್ಟು ಸಂಕಟ ತಾಯಿ? ನಿನ್ನ ಗಂಡನ ಶವವನ್ನು ಇಲ್ಲಿಗೆ ತೆಗೆದು ಕೊಂಡು ಬರುವಂತೆ ಹೇಳು–ಹೋಗು–ಬೇಗ ಹೋಗು"

ಆಕೆ ತಲೆ ಎತ್ತಿ, ಆ ತೇಜೋರಾಶಿಯನ್ನು ಒಂದು ಸಲ ನೋಡಿದಳು. ಆ ತಪೋಮೂರ್ತಿಯ ಮುಂದೆ ಮರು ಮಾತಾಡಲು ಆಕೆಗೆ ಸಾಧ್ಯವಾಗಲಿಲ್ಲ. ಸರಸರನೆ ಓಡಿದಳು – ನಡೆದ ಕಥೆಯನ್ನು ಬಂಧುಗಳಿಗೆ ಹೇಳಿದಳು. ಅವರು ಶವವನ್ನು ಸನ್ಯಾಸಿಯ ಬಳಿಗೆ ತಂದರು. ಆತ ಶವವನ್ನು ಕ್ಷಣಕಾಲ ದಿಟ್ಟಿಸಿ ನೋಡಿದ–'ಶ್ರೀರಾಮ ಶ್ರೀರಾಮ' ಎನ್ನುತ್ತ ತನ್ನ ಕಮಂಡಲದ ನೀರನ್ನು ಪ್ರೋಕ್ಷಿಸಿದ – ಶವದಲ್ಲಿ ಶಕ್ತಿ ಸಂಚರಿಸಿತು. ಮರುಕ್ಷಣದಲ್ಲೇ ಮೃತವ್ಯಕ್ತಿ – ಎದ್ದುನಿಂತ. ಎದುರಿಗಿದ್ದ ಪ್ರಾಣದಾತ ಸನ್ಯಾಸಿಗೆ ನಮಸ್ಕರಿಸಿದ. ಅಲ್ಲಿದ್ದವರ ಸಂತೋಷಕ್ಕೆ ಪಾರವಿಲ್ಲವಾಯಿತು. ಎಲ್ಲರೂ ಸನ್ಯಾಸಿಗೆ ನಮಸ್ಕಾರ ಮಾಡಿದರು.

"ಸಂತೋಷ–ಹೋಗಿಬನ್ನಿ. ಎಲ್ಲವೂ ಶ್ರೀರಾಮನ ಕೃಪೆ" ಸನ್ಯಾಸಿ ಗಂಭೀರವಾಗಿ ಹೇಳಿದ.

"ನೋಡುತಾಯಿ – ಇನ್ನೊಂದು ಮಾತು ಹೇಳಲೇ ನಿನಗೆ?"

"ಅಪ್ಪಣೆಯಾಗ ಬೇಕು – ಗುರುದೇವ"

"ನಿನ್ನ ಗರ್ಭದಲ್ಲಿ ಹುಟ್ಟುವ ಪ್ರಥಮ ಪುತ್ರನನ್ನು ನನಗೆ ಕೊಡಬೇಕು"

"ಸಂತೋಷವಾಗಿ ಅರ್ಪಿಸುತ್ತೇವೆ – ಗುರುದೇವ"

ದಂಪತಿಗಳು ಒಮ್ಮನಸ್ಸಿನಿಂದ ನುಡಿದರು. ಗುರುಕೃಪೆಯಿಂದ ಬದುಕಿದ ವ್ಯಕ್ತಿಯ ಹೆಸರು ಗಿರಿಧರಪಂತ. ಆತನ ಪತ್ನಿಯ ಹೆಸರು ಅನ್ನಪೂರ್ಣಾಬಾಯಿ. ಈ ದಂಪತಿಗಳು ಗುರು ಕಾಣಿಕೆಯಾಗಿ ಸಮರ್ಪಿಸಿದ ಪ್ರಥಮ ಪುತ್ರನ ಹೆಸರು ಉದ್ಧವ ಗೋಸ್ವಾಮಿ. ಈ ಅದ್ಭುತಕ್ಕೆ ಕಾರಣನಾದ ಆ ತಪೋನಿಷ್ಠಾ ಗರಿಷ್ಠ – ಶ್ರೀಸಮರ್ಥ ರಾಮದಾಸರು.

ಶ್ರೀ ಸಮರ್ಥ ರಾಮದಾಸರು ಹಿಂದೂ ಸಾಮ್ರಾಜ್ಯದ ರಕ್ಷಾಮಣಿಯಾದ ಛತ್ರಪತಿ ಶಿವಾಜಿಯ ಗುರುಗಳು, ಶ್ರೀ ರಾಮತಾರಕ ಮಂತ್ರ ಘೋಷದಿಂದ ಭಾರತೀಯರ ನರನಾಡಿಗಳಲ್ಲಿ ನವನೂತನ ಚೈತನ್ಯವನ್ನು ತುಂಬಿದ ಮಹಾಪುರುಷರು. ಇವರ ಪೂರ್ವಾಶ್ರಮದ ಹೆಸರು ನಾರಾಯಣ,

ಕ್ರಿ. ಶ. 1608 ರಲ್ಲಿ ಚೈತ್ರಶುದ್ಧ ನವಮಿ ನಾರಾಯಣನ ಜನನ. ಈ ಕಾರಣಪುರುಷನ ತಂದೆ ತಾಯಿಗಳು ಸೂರ್ಯಾಜಿಪಂತ ಮತ್ತು ರೇಣುಕಾಬಾಯಿ. ನಾರಾಯಣನಿಗೆ ಒಬ್ಬ ಅಣ್ಣನಿದ್ದ ಆತನ ಹೆಸರು ಗಂಗಾಧರ. ಮಾರುತಿ ಕವಚ – ವೆಂಬ ದಿವ್ಯಮಂತ್ರಾನುಷ್ಠಾನ ಬಲದಿಂದ ಗಂಗಾಧರ ತನ್ನ ಒಂಭತ್ತನೆ ವರ್ಷವಯಸ್ಸಿನಲ್ಲೇ ಹನುಮಂತನ ದಿವ್ಯದರ್ಶನ ಪಡೆದಿದ್ದ ಪುಣ್ಯ ಜೀವಿ.

ನಾರಾಯಣ ತುಂಬ ಬಲಿಷ್ಠ–ವೇದಾಧ್ಯಯನ ಸಂಪನ್ನ, ಪ್ರತಿದಿನ ಎರಡು ಸಾವಿರ ಸೂರ್ಯ ನಮಸ್ಕಾರ ಮಾಡುವುದು ಆತನ ಪದ್ಧತಿಯಾಗಿತ್ತು. ತನ್ನ ನಿಷ್ಠೆ ಹಾಗೂ ಶ್ರದ್ಧಾ ಭಕ್ತಿಗಳಿಂದ ಪ್ರಭು ರಾಮಚಂದ್ರನನ್ನು ಸಾಕ್ಷಾತ್ಕರಿಸಿಕೊಂಡಿದ್ದ ಧನ್ಯ ಜೀವಿ. ಇನ್ನು ಮೇಲೆ ನಿನ್ನ ಹೆಸರು ರಾಮದಾಸ ಎಂದು ಪ್ರಭುವೇ ಹೇಳಿದ್ದನಂತೆ!!

ತೇಜಸ್ವಿಯಾದ ನಾರಾಯಣನಿಗೆ ಮದುವೆ ಮಾಡಬೇಕೆಂದು ತಂದೆತಾಯಿಗಳಿಗೆ ತುಂಬ

ಅಭಿಲಾಷೆ. ಮದುವೆಗೆ ಬೇಕಾದ ಸಿದ್ಧತೆಗಳೆಲ್ಲ ನಡೆದಿತ್ತು. ಬಂಧುಸಂದೋಹದ ನಡುವೆ ಮಂಗಳ ವಾದ್ಯಗಳು ಭೋರ್ಗರೆಯುತ್ತಿದ್ದಂತೆ ವಧೂವರರನ್ನು ಹಸೆ ಮಣೆಗೆ ಕರೆತಂದರು. ಪುರೋಹಿತರು ವೇದ ಘೋಷ ಮಾಡುತ್ತ ಅನ್ತರಪಟ ಹಿಡಿದು ನಿಂತಿದ್ದರು. ಮಂಗಳಾಷ್ಟಕಗಳ ಮಧುರ ಧ್ವನಿಯೊಡನೆ ಅವರು ಸುಲಗ್ನಾ ಸಾವಧಾನ– ಎನ್ನುತ್ತಿದ್ದರು. ನಾರಾಯಣ ಇದನ್ನು ಗಮನಿಸಿ ಕೇಳುತ್ತಿದ್ದ 'ಸಾವಧಾನ'–ಎಂಬ ಮಾತು ಅವನ ಮನಸ್ಸಿನ ಮೇಲೆ ರಪರಪ ಹೊಡೆದಂತೆ ಭಾಸವಾಗತೊಡಗಿತು. ಸಾವಧಾನ ಎಂದರೆ ಎಚ್ಚರಿಕೆ ಎಂದರ್ಥ. ಮಂತ್ರಗಳು ಮುಗಿಯುವ ವೇಳೆಗೆ ನಾರಾಯಣ ಲಗ್ನಮಂಟಪದಿಂದ ದಡದಡನೆ ಓಡಿಹೋದ–ಯಾರ ಕೈಗೂ ಸಿಕ್ಕದಂತಹ ವೇಗದಲ್ಲಿ. ಎಲ್ಲಿ ಹುಡುಕಿದರೂ ಸಿಕ್ಕಲಿಲ್ಲ–12ವರ್ಷ ಕಾಲ!! ಮದುವೆಮನೆಯಲ್ಲಿ ಗಡಿಬಿಡಿಯಾಯ್ತು. ನಾರಾಯಣನಿಗೆ ಬಿಡುಗಡೆಯಾಯ್ತು !!

ಈ ಹನ್ನೆರಡು ವರ್ಷದವಧಿ ರಾಮದಾಸರ ಬಾಳಿನಲ್ಲಿ ಅತಿಮುಖ್ಯ. ಆತ್ಮಸಾಕ್ಷಾತ್ಕಾರಕ್ಕೆ ಬೇಕಾದ ಸಾಧನೆ–ತಪಸ್ಸು ಎಲ್ಲವೂ ನಡೆದದ್ದು ಈ ಸಮಯದಲ್ಲಿ. ಕ್ರಿ.ಶ. 1632 ರಲ್ಲಿ ತಾರಕ ಮಂತ್ರ ಜಪದ ಪೂರ್ಣಸಿದ್ಧಿ ಪಡೆದು ಪ್ರಭುವಿನ ಸೂಚನೆಯಂತೆ ರಾಮದಾಸರು ಸಮಗ್ರ ಭಾರತ ವರ್ಷದಲ್ಲಿ ಸಂಚಾರಕ್ಕೆ ಹೊರಟರು. ಮಗನನ್ನು ಹುಡುಕಿ ಹುಡುಕಿ, ಅವನಿಗಾಗಿ ಅತ್ತು ಅತ್ತು ತಾಯಿ ರೇಣುಕಾಬಾಯಿ ತನ್ನ ದೃಷ್ಟಿಯನ್ನೇ ಕಳೆದು ಕೊಂಡು ಜೀವಚ್ಛವದಂತೆ ಹೇಗೋ ಉಳಿದಿದ್ದಳು. ಇದನ್ನರಿತ ರಾಮದಾಸರು ಆಕೆ ಇದ್ದಕಡೆಗೆ ಬಂದು – ದೃಷ್ಟಿಯನ್ನನುಗ್ರಹಿಸಿ – ಆಕೆಗೆ ಕಪಿಲ ಗೀತ – ಎಂಬ ವೇದಾಂತ ಭಾಗವನ್ನು ತಿಳಿಸಿ – ಸಮಾಧಾನ ಪಡಿಸುತ್ತ ಕೆಲಕಾಲ ಆಕೆಯ ಸೇವೆ ಮಾಡುತ್ತ ಕಾಲಕಳೆದರು. ಆ ವೇಳೆಗೆ ತಂದೆ ಸತ್ತು ಬಹುಕಾಲವಾಗಿತ್ತು, ಕಾಲಕ್ರಮೇಣ– ಮಗನೊಬ್ಬ ಮಹಾಪುರುಷ–ಎಂದು ತಾಯಿಗರ್ಥವಾಯ್ತು.

ಕ್ರಿ. ಶ. 1644 ರ ವೇಳೆಗೆ ಈ ಪರಿವ್ರಾಜಕ ಕೃಷ್ಣಾನದಿಯ ದಡದಲ್ಲಿ–ಮಹೂಲಿ – ಎಂಬಕಡೆ ಒಂದು ಆಶ್ರಮವನ್ನು ಕಟ್ಟಿದರು. ಆತನ ಸನ್ನಿಧಿಗೆ ಸಾಧಕರು ತಂಡೋಪ ತಂಡವಾಗಿ ಬರತೊಡಗಿದರು. ಜಯರಾಮ, ರಂಗನಾಥ, ಆನಂದ ಮೂರ್ತಿ ಮತ್ತು ಕೇಶವ ಈ ನಾಲ್ಕುಮಂದಿ ರಾಮದಾಸರಿಗೆ ಆಪ್ತಶಿಷ್ಯರಾದರು. ಜನಜಂಗುಳಿ ಹೆಚ್ಚಿದಂತೆ ರಾಮದಾಸರು ಆ ಸ್ಥಳ ಬಿಟ್ಟರು. ಆ ಅವಧೂತನಿಗೆ ಒಂದು ನೆಲೆಯೆ! ಬಂದು ಸ್ಥಳವೇ!

ಶಿವಾಜಿ ಮಹಾರಾಜ ರಾಮದಾಸರ ದರ್ಶನಕ್ಕೆ ತುಂಬ ಪ್ರಯತ್ನ ಪಟ್ಟ. ಎಲ್ಲೆಲ್ಲೋ ಹುಡುಕಿದ. ಈ ಅನ್ವೇಷಣೆ ನಾಲ್ಕಾರುವರ್ಷ ಸಾಗಿತು. ಕಡೆಗೊಂದು ದಿನ ಶಿಂಗನವಾಡಿ ಎಂಬಲ್ಲಿ ಶಿವಾಜಿ ರಾಮದಾಸರನ್ನು ಕಂಡ. ಆಗ ಅವರು "ದಾಸ ಬೋಧ"–ಎಂಬ ಗ್ರಂಥರಚನೆ ಮಾಡುತ್ತಿದ್ದರು. ಶಿವಾಜಿಯನ್ನು ತುಂಬ ವಾತ್ಸಲ್ಯದಿಂದ ಮಾತಾಡಿಸಿದ. ಆ ಪರಿವ್ರಾಜಕ ಸನ್ಯಾಸಿ "ನಿನ್ನ ಬಾಹುಶಕ್ತಿಗೆ ನನ್ನ ತಪಸ್ಸಿನ ರಕ್ಷೆ ಇದೆ–ಹೋಗು ಅಗತ್ಯಬಿದ್ದಾಗ ನೀನಿಲ್ಲಿಗೆ ಬರಬಹುದು ಅಥವ ನಾನೇ ನಿನ್ನಲ್ಲಿಗೆ ಬಂದರೂ ಬಂದೇನು, ವಿಜಯೋಸ್ತು"– ಎಂದರು. ಶಿವಾಜಿ ಧನ್ಯಭಾವದಿಂದ ಅವರ ಶ್ರೀ ಚರಣಗಳಲ್ಲಿ ತನ್ನನ್ನು ತಾನೇ ಸಮರ್ಪಿಸಿಕೊಂಡ. ಈ ಅಪೂರ್ವ ಗುರು ಶಿಷ್ಯರ ಸಮಾಗಮ, ಹಿಂದೂ ರಾಷ್ಟ್ರದ ಇತಿಹಾಸದಲ್ಲಿ ಮಹತ್ವಪೂರ್ಣ ಘಟನೆ.

ಕ್ರಿ. ಶ. 1655 ರಲ್ಲಿ ಛತ್ರಪತಿ ಶಿವಾಜಿ ಸತಾರದಲ್ಲಿ ಬಿಡಾರಮಾಡಿದ್ದ ಸುದ್ದಿ ತಿಳಿದು, ರಾಮದಾಸರು ಅಲ್ಲಿಗೆ ಬಂದರು. ಎಂದಿನಂತೆ ಅವರು ಮಧುಕರಿ–ಭಿಕ್ಷೆಗಾಗಿ ಓಡಾಡುತ್ತ ಶಿವಾಜಿಯ ಬಿಡಾರದ ಮುಂದೆ ಬಂದು ನಿಂತರು. ಶಿವಾಜಿ ಒಂದು ಕಾಗದದಲ್ಲಿ ಏನೊ ಬರೆದು ಅವರ ಜೋಳಿಗೆಗೆ ಹಾಕಿದ. ರಾಮದಾಸರು ಆ ಕಾಗದವನ್ನು ಓದಿಕೊಂಡು ನಕ್ಕರು "ನನ್ನ ಸಮಸ್ತ ಸಾಮ್ರಾಜ್ಯವನ್ನೂ ತಮಗೆ ಸಮರ್ಪಣೆ ಮಾಡುತ್ತೇನೆ ಕೃಪೆ ಮಾಡಿ ಸ್ವೀಕರಿಸೋಣವಾಗಬೇಕು"–ಎಂದು ಆ ಕಾಗದದಲ್ಲಿ ಬರೆಯಲಾಗಿತ್ತು.

"ಶಿವಾ – ನೀನು ರಾಜ್ಯವಾಳಬೇಕಾದವನು, ನಾನಲ್ಲ – ರಾಜ್ಯದ ಚಿಂತೆ ನನಗೇಕೆ? ಅದರ ಹೆಸರೇ ರಾಜ್ಯ ಭಾರ!! ಅದು ನಿನಗೇ ಇರಲಿ"

ರಾಮದಾಸರು ನಗುತ್ತ ಹೇಳಿದರು.

"ಇದೆಲ್ಲ ತಮ್ಮ ಕೃಪಾಬಲ–ಅನುಗ್ರಹಬಲ– ನಿಮ್ಮ ವಸ್ತು ನಿಮಗೆ ಸಮರ್ಪಿಸುತ್ತೇನೆ"

ಶಿವಾಜಿಯ ಮಾತಿನಲ್ಲಿ ಅನುನಯ ವಿನಯ ತುಂಬಿತ್ತು. ಶಿಷ್ಯನ ಒತ್ತಾಯಕ್ಕೆ ಮಣಿದ ಗುರುಗಳು ತಮ್ಮ ಪಾದುಕೆಗಳನ್ನು ಅ ನು ಗ್ರ ಹಿ ಸಿ ಕೊಟ್ಟರು. ಅದನ್ನು ಸಿಂಹಾಸನದ ಮೇಲಿಟ್ಟು ತಾನು ಧರ್ಮದರ್ಶಿಯಂತೆ ಸಾಮ್ರಾಜ್ಯವ್ಯವಹಾರಗಳನ್ನು ನಿರ್ವಹಿಸುತ್ತಿದ್ದ – ಹಿಂದೂ ಸಾಮ್ರಾಜ್ಯ ರಕ್ಷಾಮಣಿಯಾದ ಶಿವಾಜಿ. ಜೀವಮಾನ ಪರ್ಯಂತ ರಾಮದಾಸರು ಶಿವಾಜಿಯ ಭಾಗ್ಯದೇವತೆಯಂತಿದ್ದವರು.

ಸಜ್ಜನ ಗಢದಲ್ಲಿ ತಮ್ಮ ಆರಾಧ್ಯಮೂರ್ತಿಯಾದ ಶ್ರೀರಾಮಚಂದ್ರನನ್ನು ಸ್ಥಾಪಿಸಬೇಕೆಂದು ರಾಮದಾಸರಿಗೆ ಅಭಿಪ್ರಾಯವಿತ್ತು. ತಮ್ಮ ದೇಶಸಂಚಾರದ ಕಾಲದಲ್ಲಿ ಅವರು ತಂಜಾವೂರಿಗೆ ಹೋಗಿದ್ದಾಗ ಅಲ್ಲೊಬ್ಬ ಪ್ರಸಿದ್ಧ ಶಿಲ್ಪಿಯನ್ನು ಕಂಡು ವಿಗ್ರಹಗಳನ್ನು ಮಾಡಿಕೊಡಿರೆಂದರು. ಸುಪ್ರಸಿದ್ಧ ಶಿಲ್ಪಿಯು, ಪರಮ ಭಕ್ತನೂ ಆಗಿದ್ದ. ಆತ ರಾಮದಾಸರ ಪಾದಗಳ ಮೇಲೆ ಬಿದ್ದು ಗೋಳಾಡುತ್ತ ಹೇಳಿದ– "ಕೆಲಸ ಮಾಡಲು ನನಗೆ ಕಣ್ಣು ಕಾಣಿಸುವುದಿಲ್ಲ"

"ಕಾಣಿಸುವಂತಾದರೆ ವಿಗ್ರಹಗಳನ್ನು ಮಾಡಿಕೊಡುತ್ತೀಯೇನು?"

"ಅಗತ್ಯವಾಗಿ – ಅದಕ್ಕಿಂತಲೂ ಭಾಗ್ಯವೇ ಗುರುದೇವ"

"ಹಾಗಾದರೆ ಸರಿ–ಇಂದಿಗೆ ಸರಿಯಾಗಿ ಐದನೇ ದಿನದಿಂದ ಕೆಲಸ ಪ್ರಾರಂಭ ಮಾಡು. ಎಲ್ಲವೂ ಸರಿಹೋಗುತ್ತದೆ" ರಾಮದಾಸರು ಶಿಲ್ಪಿಯ ಮೈಮೇಲೆ ತಮ್ಮ ಕೈಯಾಡಿಸುತ್ತ ಹೇಳಿದರು. ಅವರು ಹೇಳಿದ ಪ್ರಕಾರ ಐದನೇ ದಿನ ಅವನಿಗೆ ದೃಷ್ಟಿಬಂದಾಗ ಅವನ ಸಂತೋಷಕ್ಕೆ ಪಾರವಿಲ್ಲವಾಯ್ತು. ಸೀತಾ ರಾಮ ಲಕ್ಷ್ಮಣ ಮಾರುತಿ– ನಾಲ್ಕು ವಿಗ್ರಹಗಳು ಸಿದ್ಧವಾಯ್ತು. ಸಜ್ಜನ ಗಢಕ್ಕೆ ತರಲಾದ ಈ ಮೂರ್ತಿಗಳನ್ನು ಸ್ವಯಂ ರಾಮದಾಸರೇ ಪ್ರತಿಷ್ಠೆ ಮಾಡಿದರು. ಆ ವೇಳೆಗೆ ಸಾಕಷ್ಟು ಹಣ್ಣಾಗಿತ್ತು ಆ ಧೀರ ಸನ್ಯಾಸಿಯ ಭೌತದೇಹ, "ವ್ಯಕ್ತಿ ನಶ್ವರ ಆದರೆ ಅವನ ವಿಚಾರ ಶಾಶ್ವತ. ರಾಮನನ್ನು ಮರೆಯದಿರಿ–ರಾಮನಾಮ ನಿಮ್ಮ ನಾಲಿಗೆಯಲ್ಲಿ–ಮನದಲ್ಲಿ ಸದಾ ನಲಿದಾಡುತ್ತಿರಲಿ. ರಾಮನು ನನ್ನಿಂದ ಬರೆಸಿದ ಗ್ರಂಥಗಳು ಜಗತ್ತಿಗೆ ಮಾರ್ಗದರ್ಶನ ಮಾಡಿಸುತ್ತವೆ. ಆತನ ಕೃಪೆಯಾದರೆ ಸರಿ – ಎಲ್ಲವೂ ಆದಂತೆ–ಎಂದು ಅವರು ಪದೇಪದೇ ಹೇಳುತ್ತಿದ್ದರು. ರಾಮದಾಸರ ಮಾತು, ರಾಮನಮಾತು ಬೇರೆ ಬೇರೆಯಲ್ಲ. ಒಂದೇನಾಣ್ಯದ ಎರಡು ಮುಖಗಳು.

ನಂದಾದೀಪದ ಮಂದಪ್ರಕಾಶದಲ್ಲಿ ರಾಮನ ಮುದ್ದುಮುಖವನ್ನೇ ನೋಡುತ್ತ – ರಾಮನಾಮ ನುಡಿಯುತ್ತ – ಬಿಂದು ಸಿಂಧುವಿನಲ್ಲಿ ಲೀನವಾಯ್ತು. ಅವರು ರಚಿಸಿದ ನಾಲ್ಕುಗ್ರಂಥಗಳು– ದಾಸ ಬೋಧ, ಮನೋಬೋಧ, ಕರುಣಾಷ್ಟಕ, ಆತ್ಮ ರಾಯ – ವ್ಯಾಸ ಪೀಠದ ಮೇಲೆ ಕಂಗೊಳಿಸುತ್ತಿದ್ದವು– ಪರಮಾತ್ಮನ ಚತುರ್ಭುಜಗಳಂತೆ!!



( 12 ನೇ ಪುಟದಿಂದ )

ವನ್ನು ಕಾಪಾಡುವಂತಹ ಉತ್ತಮ ಸಂತಾನವು ಪ್ರಾಪ್ತವಾಗಲಿ ಎಂದು ಶುಭ ಮುಹೂರ್ತದಲ್ಲಿ ದಂಪತಿಗಳ ಮನವು ಏಕೀಕರಣನಾಗಿ ಜೀವನ ಪರ್ಯಂತ ಒಬ್ಬರನ್ನು ಒಬ್ಬರು ಅರಿತು ಬಾಳಲಿ ಎಂದು ಒಂದುಗೂಡಿಸುವ ಕಾರ್ಯ.

೧೦. ಪುಂಸವನ:— ಸತ್‌ಪ್ರಜೆಯೂ ವೀರ್ಯವಂತನೂ, ತೇಜೋವಂತನೂ, ಆದಂತಹ ಮಗನಾಗಿ ಅವನಿಂದ ಉತ್ತಮ ಕಾರ್ಯವು ಮುಂಮುವರೆಯಲೆಂದು ಮಾಡುವ ಶುಭ ಕಾರ್ಯ.

೧೧. ಸೀಮಂತ:— ಧಾರಣೆಯಾದ ಗರ್ಭ ಶಕ್ತಿಯು ಸ್ಥಿರವಾಗಿ ನಿಂತು ಹುಟ್ಟುವ ಮಗನು ಗುಣವಂತನೂ ಆರೋಗ್ಯವಂತನೂ ಆಯುಷ್ಯವಂತನೂ ಆಗಲೆಂದು ಆಶೀರ್ವದಿಸುವ ಕರ್ಮಾಂಗ.

೧೨. ಜಾತಕರ್ಮ:— (ಕರ್ಣವೇಧ) ಮಗುವಿನ ಸ್ಮರಣಾಶಕ್ತಿಯು ವೃದ್ಧಿಯನ್ನು ಹೊಂದಲೆಂದು ಆಚರಿಸುವುದೇ ಆಗಿದೆ. ಜಾತವೆಂದರೆ ಹುಟ್ಟು, ಎಂದು ಜನಿಸಿದ ಸಂಕೇತವಾಗಿ ಸ್ಮರಣಶಕ್ತಿಯುಂಟಾಗಲೆಂದು ಆಚರಿಸುವುದೇ ಆಗಿದೆ.

೧೩. ನಾಮಕರಣ:— ಜನಿಸಿದ ಶಿಶುವಿಗೆ ತನ್ನ ಕುಲದೇವರ ಹೆಸರನ್ನೋ ಅಥವ ತನ್ನ ಹಿಂದಿನ ವಂಶಜರ ಹೆಸರನ್ನೋ ಇಟ್ಟು ಅವರಂತೆ ತೇಜೋವಂತನಾಗಲೆಂದು ಗುರುತಿಗಾಗಿ ಕರೆಯುವ ಹೆಸರಿಡುವ ಕಾರ್ಯ.

೧೪. ಅನ್ನಪ್ರಾಶನ:—ಇದರಿಂದ ದೀರ್ಘ ಯಶಸ್ಸು, ಶರೀರಶಕ್ತಿ, ಸ್ಮರಣಶಕ್ತಿ ಇವೇ ಮೊದಲಾದವುಗಳುಂಟಾಗಲೆಂದು ಜೀವಾಧಾರವಾದ ಅನ್ನವನ್ನು ಮಗುವಿಗೆ ಶುಭ ಮುಹೂರ್ತದಲ್ಲಿ ತಿನ್ನಿಸುವ ಕಾರ್ಯ. ಇದರ ಜೊತೆಗೆ ಅಥವ ಮುಂಚಿತವಾಗಿ ಮಗುವನ್ನು ಪ್ರಥಮವಾಗಿ ಮನೆಯಿಂದ ಹೊರಗೆ ಕರೆದುಕೊಂಡು ಬರಲು ಮಾಡುವ ಕಾರ್ಯವೂ ಅಂದರೆ ಅವರ ಕುಲದೇವರ ಸಾನಿಧ್ಯಕ್ಕೆ ಕರೆದುಕೊಂಡು ಹೋಗುವ ಪದ್ಧತಿಯೂ ಉಂಟು. ಅಲ್ಲೇ ಈ ಅನ್ನಪ್ರಾಶನವನ್ನು ಮಾಡುವ ಪದ್ಧತಿ ಕೆಲವರು ಆಚರಿಸುತ್ತಾರೆ.

೧೫ ಉಪನಯನ:— ಇದು ಮಹತ್ವಪೂರ್ಣವಾದ ಕಾರ್ಯ. ಮುಖ್ಯವಾಗಿ ಈ ಕಾರ್ಯಾಂಗದಲ್ಲಿ ಬಾಲಕನಿಗೆ ಶುಚಿತ್ವ ಸ್ಮರಣಶಕ್ತಿ, ಸಂಯಮ, ಸಹನೆ, ಇವೇ ಮೊದಲಾದವುಗಳನ್ನು ರೂಢಿಸಿಕೊಂಡು ಜೀವನದಲ್ಲಿ ಶ್ರೇಯಃ ಸಾಧನೆಗೆ ಸೂಕ್ತವಾದ ಉಪದೇಶವನ್ನು, ನೀಡುವಿಕೆ. ಸನಾತನ ಧರ್ಮದ ತಳಹದಿಯಾದ ವೇದಾಧ್ಯಯನವನ್ನು, ಇದರಿಂದ ದೈವದ ಚಿಂತನೆ. ಈ ಮಹತ್ ಚಿಂತನೆಯಿಂದ, ಆತ್ಮಚಿಂತನೆ, ಇದರಿಂದ ಸರ್ವದಾ ಸರ್ವವ್ಯಾಪಕನಾದ ಭಗವಂತನ ವೈಭವ ಪೂರ್ಣವಾದ ಶಕ್ತಿ, ಆ ಶಕ್ತಿಯೇ ಸರ್ವಭೂತಗಳ ಹೃದಯದಲ್ಲಿ ಬೆಳಗುತ್ತಿರುವ ಚೈತನ್ಯಮಯವಾದ ಪರಮಾತ್ಮನೆಂಬ ಜ್ಞಾನೋದಯ. ಈ ಜ್ಞಾನೋದಯವೇ ಸರ್ವರಲ್ಲೂ ಸಮಾನತ್ವ ಭಾವನೆಯಿಂದ ಲೋಕಕಲ್ಯಾಣ ಪ್ರೇರಣೆಯಿಂದ ಜನತಾಸೇವಾಮನೋಭಾವ ಈ ಉತ್ತಮವಾದ ಮನೋಭಾವನೆಯು ಇದರಲ್ಲಿ ಅಡಗಿರುವ ಶಕ್ತಿಯಿಂದ ಕರ್ಮಾನುಷ್ಠಾನದಿಂದ ಬುದ್ಧಿಯ ಪ್ರಚೋದನೆಯು ಉಂಟಾಗುತ್ತದೆ.

ಅದರ ಜೊತೆಯಲ್ಲಿ ಅಥವ ಅದಕ್ಕೆ ಮುಂಚೆ ಮಗುವನ್ನು ತಮ್ಮ ಕುಲದೇವತಾ ಸಾನಿಧ್ಯಕ್ಕೆ ಕರೆಗುಕೊಂಡು ಹೋಗಿ ಹುಟ್ಟು ಕೂದಲನ್ನು ತೆಗೆಯುವುದು ಅಂದರೆ ಶರಣಾಗತವಾದ ಲಕ್ಷಣ. ಯಾವದೇವತಾ ಸಾನಿಧ್ಯದಲ್ಲಿ ಈ ಕಾರ್ಯವನ್ನು ಮಾಡುತ್ತಾರೋ ಆ ದೇವರಿಗೆ ಮುಂದೆ ತಲೆಬಾಗಿ ನಡೆದುಕೊಳ್ಳಲಿ ಎಂಬ ಭಾವನೆ ಇರತಕ್ಕದಾಗಿದೆ.

೧೬. ಸಾಂವತ್ಸರಿಕ ಶ್ರಾದ್ಧ:—ಜನ್ಮಕ್ಕೆ ಕಾರಣರಾದ ಮಾತಾಪಿತೃಗಳು ಜೀವಂತವಾಗಿದ್ದರೆ, ಅವರ ಸೇವಾಶಿಶ್ರೂಷೆಯನ್ನು ಅಥವ ಅವರು ಕಾಲವಾಗಿದಲ್ಲಿ ಅವರ ಹೆಸರಿನಲ್ಲಿ ವರ್ಷಕ್ಕೆ ಒಂದು ದಿವಸ ದಾನ ಧರ್ಮವನ್ನು ಮಾಡಿ ಪಿತೃಗಳನ್ನು ಸ್ಮರಿಸಿ ಅವರಿಗೆ ಗೌರವವನ್ನು ಅರ್ಪಿಸುವ ಕಾರ್ಯವೇ ಈ ಶ್ರಾದ್ಧಕಾರ್ಯವಾಗಿದೆ— ಯಾರು ಹೀಗೆ ಸನಾತನ ಹಿಂದೂ ಧರ್ಮದ ಮೂಲವಾದ ವೈದಿಕ ಧರ್ಮವನ್ನು ಅನುಸರಿಸಿ ನಡೆಯುವರೋ ಅಂತಹವರೇ ನಿಜವಾದ ಗುರಿಯನ್ನು ಸೇರುವರಲ್ಲದೆ ಮನಃಶಾಂತಿಯನ್ನೂ ಸುಖವನ್ನೂ ಅನುಭವಿಸಲು ಸಮರ್ಥರೆನಿಸಿಕೊಳ್ಳುತ್ತಾರೆ. ಇದಕ್ಕೆ ನಮ್ಮ ಧರ್ಮ— ಆ ಧರ್ಮದಲ್ಲಿ ಶ್ರದ್ಧೆ ಎಷ್ಟು ಮುಖ್ಯವೋ; ಅಷ್ಟೇ ಅವು ಪ್ರಮಾಣರೂಪವಾದ ಮಾರ್ಗದರ್ಶನವಾಗಿವೆ ಎಂಬ ದೃಢ ಸಂಬಿಕೆಯೂ ಮುಖ್ಯ - ಇದನ್ನೇ

ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ
ಕಾರ್ಯಾಕಾರ್ಯ ವ್ಯವಸ್ಥಿತೌ ।
ಜ್ಞಾತ್ವಾ ಶಾಸ್ತ್ರ ವಿಧಾನೋಕ್ತಂ
ಕರ್ಮ ಕರ್ತು ಮಿಹಾರ್ಹಸಿ ।

ಕಾರ್ಯ (ಮಾಡಬೇಕಾದುದು) ಅಕಾರ್ಯ (ಮಾಡಬಾರದೇ ಇರುವುದು) ಇವುಗಳ ತಿಳುವಳಿಕೆಯಲ್ಲಿ ಶಾಸ್ತ್ರವೇ ಪ್ರಮಾಣವು. ಶಾಸ್ತ್ರದಲ್ಲಿ ಹೇಳಿರುವುದನ್ನು ಅರಿತುಕೊಂಡು ಇಲ್ಲಿ ಕರ್ಮಗಳನ್ನು ಮಾಡಬೇಕು. ಇದೇ ಜ್ಞಾನಾರ್ಜನೆಯ ಸಾಧನವು. ಹಿತವೆಂದು ಮಾಡುವುದಾಗಲೀ ಅಥವ ತನಗೆ ಅಹಿತವೆಂದು ಬಿಡುವುದಕ್ಕಾಗಲೀ ಸ್ವಾತಂತ್ರ್ಯವು ಇರುವುದಿಲ್ಲ. ಯಾವುದನ್ನು ಮಾಡಬೇಕೆಂದು ಹೇಳಿದೆಯೋ ಅದನ್ನು ಮಾಡಿದಲ್ಲಿ ನಮಗೆ ನಿಜವಾದ ಸುಖವು ದೊರೆಯುವುದು. ಅವನೇ ನಿಜವಾಗಿ ದೇಶಸೇವೆಯನ್ನು ಮಾಡಲು ಸಮರ್ಥನೆನೆಸಿಕೊಳ್ಳುವನು. ಆದರೆ ಯಾರು ತಿರಸ್ಕರಿಸಿ ಈ ಶಾಸ್ತ್ರ ಪ್ರಮಾಣದಲ್ಲಿ ಅಗೌರವವನ್ನು ಸೂಚಿಸುವರೋ ಅವನು—

ಯಃ ಶಾಸ್ತ್ರವಿಧಿ ಮುತ್ಸೃಜ್ಯ ವರ್ತತೇ
ಕಾಮ ಕಾತರಃ ।
ನಸಿದ್ಧಿಮವಾಪ್ನೋತಿ ನಸುಖಂ ನಪರಾಂ
ಗತಿಃ ॥

ಯಾವುದು ಮಾಡಲು ಯುಕ್ತ, ಯಾವುದು ಅಯುಕ್ತವೆಂದು ಅರಿಯದೇ ಇರುವವನು ಇವೆರಡನ್ನೂ ಬಿಟ್ಟು ಮತ್ತೆ ಬೇರೆ ಏನನ್ನೋ ಮಾಡುವನು. ಅನುಭವವಿಲ್ಲದೆ ಮಾಡಿದುದರ ಪರಿಣಾಮವಾಗಿ ಅನರ್ಥ ಉಂಟಾಗಿ ಮನಃ ಶಾಂತಿಯನ್ನು ಕಳೆದುಕೊಂಡವನಾಗುತ್ತಾನೆ. ಮನಃಶಾಂತಿಯಿಲ್ಲದಮೇಲೆ ಸುಖನೆಲ್ಲಿಯದು: ಸುಖಸ್ವರೂಪವೇ ಶಾಂತಿಯಲ್ಲವೆ? ಇದನ್ನರಿಯದವನೇ ಮೂಢನು. ಇಲ್ಲಿಯೇ ಶಾಸ್ತ್ರವನ್ನು ಅವನು ತಿರಸ್ಕರಿಸಿ ನಿಯಮವನ್ನು ಪಾಲಿಸದೇ ಹೋದಾಗ ಅವನಿಗೆ ಪರಾ

( 10 ನೇ ಪುಟದಿಂದ )

ವ್ಯಾಮುಗ್ಧರಾಗಿ ನಮ್ಮ ಧರ್ಮದ ಹಿರಿಮೆಯನ್ನರಿಯದವರಾಗಿದ್ದೇವೆ.

ಶಿವರಾತ್ರಿಯಂದು ಹಗಲು ಶಿವದೇವಾಲಯಕ್ಕೆ ಹೋಗಿ ಮಹಾನ್ಯಾಸ ಪೂರ್ವಕವಾದ ರುದ್ರಾಭಿಷೇಕ ಮಾಡಿ, ರಾತ್ರಿ ಜಾಗರದಿಂದ ಈ ಹಿಂದಿನ ಅರ್ಧನಾರೀಶ್ವರ ಅಷ್ಟಕವನ್ನು ಪಠಿಸಿರಿ.

ನಮ್ಮ ಹಿರಿಯರು ಅರ್ಧನಾರೀಶ್ವರ ಸ್ತವವನ್ನು ದಿನವೂ ಅನೂಚಾನವಾಗಿ ರಾತ್ರಿ ಪಠಿಸುತ್ತಿದ್ದರು. ಇದರ ಭಾವವೆಂದರೆ, ಪಾರ್ವತೀದೇವಿಯು ಪ್ರವೃತ್ತಿಯನ್ನು ಪರಮೇಶ್ವರನು ನಿವೃತ್ತಿಯನ್ನೂ ಸೂಚಿಸುವರು. ಎಂದರೆ ಪ್ರಪಂಚದಲ್ಲಿನ ಸೃಷ್ಟಿ ಕ್ರಮಕ್ಕೆ ಪಾರ್ವತಿ ಪ್ರಯತ್ನಿಸುತ್ತಿರುವಲ್ಲಿ ಶಿವನು ಸಂಹಾರ ಕ್ರಮವನ್ನು ಅನುಸರಿಸುತ್ತಿದ್ದಾನೆ. ಹಾಗಾಗಿ ಒಂದು ಕಡೆ ಹೊಸ ಜೀವಿಗಳು ಹುಟ್ಟುತ್ತಿದ್ದರೆ ಇನ್ನೊಂದೆಡೆ ಸಾವು ಸಂಭವಿಸುತ್ತಿರುತ್ತದೆ. ಈ ಜಗನ್ನಾಟಕವೆನ್ನುವುದು ಕೊನೆಯಿಲ್ಲದ್ದು. ಅಸಂಖ್ಯ ಜನ ಭೂಮಿಯಲ್ಲಿ ಹುಟ್ಟಿ ಗತಿಸಿದ್ದಾರೆ. ಅವರ ನಾಮರೂಪಗಳು ಇಂದಿಲ್ಲ. ನಮ್ಮ ಜೀವನವೂ ಹಾಗೆಯೇ ನೀರ ಮೇಲಿನ ಗುಳ್ಳೆಯಂತೆ ಎಂದು ಗ್ರಹಿಸಿ ಜನ್ಮರಾಹಿತ್ಯಕ್ಕಾಗಿ ಪರಮೇಶ್ವರನನ್ನು ಆರಾಧಿಸಬೇಕೆಂದು ಈ ಅಷ್ಟಕ ತಿಳಿಸುತ್ತದೆ. ಜನನವೆಂದಾಕ್ಷಣ ಮೃತ್ಯುವು ಹಿಂದೆಯೇ ಬರುತ್ತದೆ. ನಾವೆಲ್ಲ ಎಷ್ಟು ಜನ್ಮಗಳನ್ನೊ ಮುಗಿಸಿರುವೆವೆಂದುಕೊಂಡು ಈ ಮಾನವ ಜನ್ಮದ ಹಿರಿಮೆಯನ್ನು ಅರಿತು, ಅದನ್ನು ವ್ಯರ್ಥ ಪಡಿಸದೆ ಬೆಳಕಿದ್ದಾಗಲೇ ಮನೆಯನ್ನು ಗುಡಿಸಿ ಇಟ್ಟುಕೊಳ್ಳಬೇಕು. ಆರೋಗ್ಯವಾಗಿದ್ದಾಗಲೇ ಈಶ್ವರಾನುಗ್ರಹಕ್ಕಾಗಿ ಶಿವಾರಾಧನೆ ಮಾಡಬೇಕು.

ಸಕಲಕೆಲ್ಲಕು ನೀನೆ ಅಕಳಂಕ ಗುರುವೆಂದು ನಿಖಿಳ ಶಾಸ್ತ್ರವು ಪೇಳುತಿರಲರಿದೆನು.<br>
ಅವರವರ ದರುಶನಕೆ ಅವರವರ ವೇಶದಲಿ ಅವರವರಿಗೆಲ್ಲ ಗುರು ನೀನೊಬ್ಬನೆ<br>
ಅವರವರ ಭಾವಕ್ಕೆ ಅವರವರ ಪೂಜೆಗಂ ಅವರವರಿಗೆಲ್ಲ ದೇವ ನೀನೊಬ್ಬನೆ<br>
ಹೋರಾಟ ವಿಕ್ಕಿಸಲು ಬೇರಾದೆಯಲ್ಲದೆ ಬೇರುಂಟೆ ಜಗದೊಳಗೆ ಎಲೆ ದೇವನೆ<br>
ಅರು ಅರಿಯರು ನೀನು ಬೇರಾದ ಪರಿಗಳನು ಪರಾರಾರಿ ಶಿವಷಡಕ್ಷರಿ ಲಿಂಗವೇ.

– ಮುಪ್ಪಿನ ಷಡಕ್ಷರಿ.

ಮಹಾಭಕ್ತ ಬಮ್ಮೆರ ಪೋತನನು ಭಾಗವತವನ್ನು ಬರೆಯುತ್ತ ಕೊನೆಗೆ ಈ ರೀತಿ ಬರೆದಿರುವನು.

ಅಂಧೇಂದೂದಯಗಳ್ ಮಹಾಬಧಿರ<br>
ಶಂಖಾರಾವಗಳ್, ಮೂಕಸತ್<br>
ಗ್ರಂಥಾಖ್ಯಾಪನೆಗಳ್ ನಪುಂಸಕ<br>
ವಧೂಕಾಂಕ್ಷೆಯುಂ ಕೃತಘ್ನಾವಳ<br>
ಬಂಧುತ್ವವುಂ ಭಸ್ಮ ಹೋಮವುಂ<br>
ಲುಬ್ಧ ದ್ರವ್ಯವುಂ ಕ್ರೋಢಸತ್<br>
ಗಂಧವುಂ ಹರಿಭಕ್ತಿ ವರ್ಜಿತನ ರಿಕ್ತವ್ಯರ್ಥ<br>
ಸಂಸಾರವುಂ

ಹರಿಭಕ್ತಿಯನ್ನು ಹೊಂದಿರದವನು ಏನೆಲ್ಲ ಸಂಪದೈಶ್ವರ್ಯಗಳನ್ನು ಹೊಂದಿದ್ದರೂ ಅವೆಲ್ಲ ವ್ಯರ್ಥ. ಕುರುಡನಿಗೆ ಬೆಳದಿಂಗಳಂತೆ, ಕಿವುಡನಿಗೆ ಶಂಖನಾದದಂತೆ, ಮೂಕನು ಪುರಾಣ ಪ್ರವಚನ ಮಾಡಿದಂತೆ ನಪುಂಸಕನ ಕಾಮದಂತೆ, ಕೃತಘ್ನ ಜನರ ಬಂಧುತ್ವದಂತೆ, ಬೂದಿಯಲ್ಲಿನ ಹೋಮದಂತೆ, ಲೋಭಿಯ ಧನದಂತೆ, ಹಂದಿಗೆ ಸುಗಂಧದಂತೆ, ಎಂದರೆ ಏನೆಲ್ಲ ಇದ್ದರೂ ಅದರ ಅಂತಃಸತ್ವವಾಗಿ ಆನಂದದ ಮೂಲ ಪ್ರೇರಕವಾಗಿ ಭಗವದ್ಭಕ್ತಿ ಆರಾಧನ ಇರಬೇಕೆಂಬುದು ತಾತ್ಪರ್ಯ. ಕೆಲವುಂದಿ ತಿಳಿಯದವರು ವಿಷ್ಣುವೋ ಶಿವನೋ ಎಂದು ವಾದಿಸುವುದುಂಟು. ಭಗವಂತ ಒಬ್ಬನೇ ಎಂಬುದನ್ನು ಅವರು ಮರೆಯುವರು. ಸೃಷ್ಟಿಯಲ್ಲಿ ಬ್ರಹ್ಮನಾಗಿ, ಪೋಷಣೆಯಲ್ಲಿ ವಿಷ್ಣುವಾಗಿ, ಸಂಹಾರದಲ್ಲಿ ಶಿವನಾಗುವ ಅವನನ್ನು ಶಿವರಾತ್ರಿಯಂದು ಶಿವನೆಂದು ಪೂಜಿಸುವುದು ಎಲ್ಲರ ಕರ್ತವ್ಯ. ★

---



ಗತಿ – ಉತ್ತಮವಾದ ಕಾರ್ಯಗಳು ಉತ್ತಮವಾದ ಫಲಗಳು ಮುಂದೆತಾನೇ ಹೇಗೆ ಬರಲು ಸಾಧ್ಯ. ಆದ್ದರಿಂದ ಅವನು ಸರ್ವಥಾ ದುಃಖಿಯೇ ಆಗುವನು. ಆದರೆ ಯಾರೂ ದುಃಖವನ್ನು ಬಯಸುವುದಿಲ್ಲವಾದುದರಿಂದ, ಸುಖವನ್ನು ಬಯಸುವವರೆಲ್ಲ (ಯಾರೇ ಆದರೂ) ಈ ಶಾಸ್ತ್ರ ನಿಯಮವನ್ನು ಗೌರವಿಸಿ ಪಾಲಿಸಿ ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ವಿಜ್ಞಾನ ಯುಗವೆಂದು ಯಾರು ತನ್ನ ಧರ್ಮಶಾಸ್ತ್ರವನ್ನು ಅಲ್ಲಗಳೆಯುವನೋ ಅವನು ತನ್ನನ್ನು ತಾನು ಅಗೌರವಿಸಿಕೊಂಡಂತೆ ಆಗಿ ಅವನತಿಯನ್ನು ಹೊಂದುತ್ತಾನೆ. ಆದ್ದರಿಂದ ಪ್ರತಿಯೊಬ್ಬಹಿಂದೂ ಪ್ರಜೆಯು ತನ್ನ ಧರ್ಮಶಾಸ್ತ್ರಗಳನ್ನು ಗೌರವಿಸಿ ತನ್ನ ಧರ್ಮದಲ್ಲಿ ಜಾಗೃತನಾಗಿ ತನ್ನನ್ನು ತನ್ನ ದೇಶವನ್ನು ಮತ್ತು ಮಾತೃಭೂಮಿಯ ಗೌರವವನ್ನು ಕಾಪಾಡಿಕೊಳ್ಳುವಂತೆ ಜ್ಞಾನಪ್ರಚೋದನೆಯನ್ನು ಹೊಂದುವಂತಾಗಲಿ.

---

# ಕಿಶೋರ ಜಗತ್



ಮಹರ್ಷಿ ವಾಲ್ಮೀಕಿಯು ಹೆಸರು ರಾಮಾಯಣವನ್ನು ಬರೆದುದರಿಂದ ಪ್ರಸಿದ್ಧ ವಾಗಿದೆ. ಶ್ರೀರಾಮಚಂದ್ರನ ಕಾಲದಲ್ಲಿಯೇ ಆತನಿದ್ದ. ಮಹರ್ಷಿ ವಾಲ್ಮೀಕಿ ಮತ್ತು ಆದಿಕವಿ ವಾಲ್ಮೀಕಿ ಇಬ್ಬರೂ ಬೇರೆ ಬೇರೆ ಆಗಿರಬೇಕೆಂದೆನಿಸುತ್ತದೆ. ನಂತರ ಇಬ್ಬರ ಕತೆಯೂ ಸೇರಿ ಒಂದಾಗಿರಬೇಕು. ಈಗ ಅದನ್ನು ಬೇರೆ ಮಾಡುವುದು ಕಷ್ಟ.

ಮಹರ್ಷಿ ವಾಲ್ಮೀಕಿಯು ಆಶ್ರಮ ತಮಸಾನದಿಯ ದಂಡೆಯಲ್ಲಿ ಗಂಗೆಯ ದಕ್ಷಿಣ ದಿಕ್ಕಿಗೆ ಇತ್ತು. ಅವನು 'ಕುಲಪತಿ' ಆಗಿದ್ದ. ಅವನ ಆಶ್ರಮದಲ್ಲಿ ಹತ್ತು ಸಾವಿರ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು, ಅವರನ್ನು ಸಾಕುತ್ತಾ ಮಹರ್ಷಿ ಅವರಿಗೆ ಶಿಕ್ಷಣ ನೀಡುತ್ತಿದ್ದ.

ತನ್ನ ಜೀವನ ಪ್ರಾರಂಭದಲ್ಲಿ ಆತ ದರೋಡೆಕಾರನಾಗಿದ್ದನೆಂದು ಕತೆ ಇದೆ. ಜನ್ಮದಿಂದ ಬ್ರಾಹ್ಮಣನಾದರೂ ಕಿರಾತರ ಜೊತೆಗೆ ಸೇರಿ ಕಳ್ಳತನ ಮಾಡುತ್ತಿದ್ದ. ದಟ್ಟವಾದ ಕಾಡಿನಲ್ಲಿ ದಾರಿಯ ಬದಿಗೆ ಪೊದರುಗಳಲ್ಲಿ ಅವಿತುಕೊಂಡು ದಾರಿಹೋಕರ ಮೇಲೆ ಬಿದ್ದು – ಹೊಡೆದು ಸುಲಿಗೆ ಮಾಡುತ್ತಿದ್ದ. ಒಮ್ಮೆ ಏಳು ಜನ ಋಷಿಗಳು ಆ ದಾರಿಯಾಗಿ ಹೋಗುತ್ತಿದ್ದರು. ನಾರದನೂ ಅವರಲ್ಲಿ ಒಬ್ಬ. ವಾಲ್ಮೀಕಿ ನಾರದನನ್ನು ಹಿಡಿದುಕೊಂಡ. ದೇವಋಷಿಯಾದ ನಾರದ ಹೆದರಲಿಲ್ಲ. ಬದಲಾಗಿ – "ನೀನು ಕಳ್ಳತನ ಮಾಡುತ್ತೀ ಇದು ಪಾಪ ಕಾರ್ಯ" ಎಂದು ಹೇಳಿದ. "ನಾನು ನನಗಾಗಿ ಕಳ್ಳತನ ಮಾಡುತ್ತಿಲ್ಲ. ನನ್ನ ಕುಟುಂಬದವರ ಸಾಕಣೆಗೇ ಈ ಕೆಲಸ ಮಾಡುತ್ತಿದ್ದೇನೆ." ಎಂದು ವಾಲ್ಮೀಕಿ ಹೇಳಿದ.

"ಹಾಗಾದರೇ ನಿನ್ನ ಕುಟುಂಬದವರೂ ಈ ಪಾಪದಲ್ಲಿ ಪಾಲುಗಾರರಾಗಲು ಸಿದ್ಧರಿರುವರೇ" ನಾರದ ಪ್ರಶ್ನಿಸಿದ.

"ಅದನ್ನು ನಾನು ಕೇಳಿಲ್ಲ" ವಾಲ್ಮೀಕಿ ಹೇಳಿದ.

"ನಾರದ ಹೇಳಿದ – ಈ ದಿನವೇ ಕೇಳು, ಹೆದರಬೇಡ. ನನ್ನನ್ನು ಕಟ್ಟಿ ಜೊತೆಗೇ ಕರೆದುಕೊಂಡು ಹೋಗು."

ವಾಲ್ಮೀಕಿ ನಾರದನನ್ನು ಕಟ್ಟಿ ಮನೆಗೆ ಕರೆದುಕೊಂಡು ಹೋದ. ಅಲ್ಲಿ ತನ್ನ ತಂದೆ ತಾಯಿ, ಹೆಂಡತಿ, ಬಂಧುಗಳನ್ನು ಒಬ್ಬೊಬ್ಬರನ್ನಾಗಿ ಕೇಳಿದ — "ಜನರನ್ನು ಕೊಂದು ಸುಲಿಗೆಮಾಡಿ, ನಾನು ಮಾಡುವ ಪಾಪದಲ್ಲಿ ನೀವೂ ಭಾಗಿಗಳಾಗುತ್ತೀರಾ? ಆ ಪಾಪದ ಫಲ ಅನುಭವಿಸಲು ಸಿದ್ಧರಿದ್ದೀರಾ?"

ಎಲ್ಲರದೂ ಒಂದೇ ಉತ್ತರ–"ನಮ್ಮನ್ನು ಸಾಕುವುದು ನಿನ್ನ ಕರ್ತವ್ಯ. ಪಾಪವಾಗಲೀ ಪುಣ್ಯವಾಗಲೀ ಅವರೆ ನಿನ್ನದೇ."

ಈ ಉತ್ತರ ಕೇಳಿ ವಾಲ್ಮೀಕಿ ಬೆರಗಾಗಿ ನಿಂತ – ಗರ ಬಡಿದವನಂತೆ, "ನಾನು ಮಾಡಿದ ಪಾಪದ ಲಾಭವನ್ನು ಇವರೆಲ್ಲ ಅನುಭವಿಸಿದರು. ಅದರ ಫಲವನ್ನು ನಾನು ಅನುಭವಿಸ ಬೇಕು. ಇಲ್ಲ, ಇಲ್ಲ, ಇದಾಗದು. ನಾನು ಹೀಗೆ ಮಾಡಲಾರೆ. ಬೇರೆಯವರಿಗಾಗಿ ನಾನು ಕಳ್ಳತನ ಸುಲಿಗೆ ಮಾಡಲೇಕೆ" ಎಂದು ಯೋಚಿಸುತ್ತಾ ನಾರದನ ಬಳಿ ಹಿಂತಿರುಗಿ ಬಂದ. ದುಃಖದಿಂದ ಆತನ ಕಣ್ಣುಗಳಲ್ಲಿ ನೀರು ತುಂಬಿತ್ತು. ನಾರದನ ಕಾಲುಗಳಿಗೆ ನಮಸ್ಕರಿಸಿ "ನನಗೇನಾದರೂ ಬೇರೆ ದಾರಿ ತೋರಿಸಿರಿ. ನಾನು ಈ ಪಾಪದಿಂದ ಮುಕ್ತನಾಗಬೇಕು" ಎಂದ.

ನಾರದ ಹೇಳಿದ, "ನೀನು ರಾಮನ ನಾಮವನ್ನು ಜಪಿಸುತ್ತಿರು, ಎಲ್ಲವೂ ಶುಭವಾಗುತ್ತದೆ."

ವಾಲ್ಮೀಕಿಯು ಕಳ್ಳತನ ಸುಲಿಗೆ ಕೊಲೆಗಳನ್ನು ಬಿಟ್ಟ. ಆದರೆ ಆತ ಅವಿದ್ಯಾವಂತ, ಮೂರ್ಖನಾಗಿದ್ದ. ರಾಮನಾಮವನ್ನೂ ಸರಿಯಾಗಿ ಉಚ್ಚರಿಸದೆ ಮರಾ ಮರಾ ಎಂದೇ ಹೇಳುತ್ತಿದ್ದ. ಆದರೆ ಹಸಿವು ಬಾಯಾರಿಕೆಯ ಚಿಂತೆ ಇಲ್ಲದೆ ಏಕಾಗ್ರತೆಯಿಂದ ರಾಮನಾಮವನ್ನು ಜಪಿಸುತ್ತಿದ್ದ. ಹಲವಾರು ವರ್ಷ ಒಂದೇ ಕಡೆ ಕುಳಿತಿದ್ದ. ಹಾಗಿರುವಾಗ ಗೆದ್ದಲಿರುವೆಗಳು ಆತನ ಮೈಯ ಸುತ್ತ ಹುತ್ತವನ್ನು ಕಟ್ಟಿದವು. ಹುತ್ತವನ್ನು "ವಲ್ಮೀಕ" ವೆಂದು ಸಂಸ್ಕೃತದಲ್ಲಿ




ಹೇಳುತ್ತಾರೆ. ಅದುದರಿಂದಲೇ ಆತನನ್ನು ವಾಲ್ಮೀಕಿ ಎಂದೆನ್ನುತ್ತಾರೆ. ಮೊದಲು ಆತನ ಹೆಸರು 'ರತ್ನಾಕರ' ನೆಂದಿತ್ತು.

ಆತನ ಈ ತರದ ಅಖಂಡ ತಪಸ್ಸಿನಿಂದ ಬ್ರಹ್ಮದೇವರು ತೃಪ್ತರಾಗಿ, ನಿನಗೆ ಶ್ರೀರಾಮ ದರ್ಶನವಾಗಲಿ ಎಂದು ಆಶೀರ್ವದಿಸಿದರು.

ಈ ರೀತಿ ದರೋಡೆಕಾರನಿಂದ ತಾಪಸಿ ವಾಲ್ಮೀಕಿಯಾಗಿ ತಮಸಾನದಿ ಕಿನಾರೆಯಲ್ಲಿ ಆಶ್ರಮ ಮಾಡಿ ವಾಸಿಸತೊಡಗಿದ. ಕ್ರಮೇಣ ಮಹರ್ಷಿ ಪದವಿಯನ್ನು ಪಡೆದ.

**ರಸಿಕ ಪುತ್ತಿಗೆ**

ಒಂದು ದಿನ ಆಶ್ರಮದ ಸಮೀಪ ತಿರುಗಾಡುತ್ತಿರುವಾಗ ಒಬ್ಬ ಬೇಡನನ್ನು ನೋಡಿದ. ನೋಡುತ್ತಿದ್ದಂತೇ ಆತ ಕ್ರೌಂಚ ಪಕ್ಷಿದಂಪತಿಗಳಲ್ಲಿ ಗಂಡು ಕ್ರೌಂಚಕ್ಕೆ ಬಾಣ ಬಿಟ್ಟು ಕೆಳಗೆ ಬೀಳಿಸಿದ. ತನ್ನ ಸಂಗಡಿಗ ಸತ್ತುದನ್ನು ನೋಡಿ ಹೆಣ್ಣು ಪಕ್ಷಿ ಬಹಳ ದುಃಖದಿಂದ ಅಳತೊಡಗಿತು. ಇದನ್ನು ನೋಡಿ ಮಹರ್ಷಿ ವಾಲ್ಮೀಕಿ ಬಹಳ ದುಃಖಿತನಾದ. ಆ ಬೇಡರವನಿಗೆ ಶಾಪಕೊಡಲು ಋಷಿಯ ಬಾಯಿಂದ ಒಂದು ಶ್ಲೋಕ ಹೊರಟಿತು. ಅದಕ್ಕಿಂತ ಮೊದಲು ಜಗತ್ತಿನಲ್ಲಿ ಯಾರೂ ಕವಿತೆ ಮಾಡಿರಲಿಲ್ಲ. ಅದು ಮೊದಲನೆಯ ಕವಿತೆ. ಆದುದರಿಂದ ಮಹರ್ಷಿ ವಾಲ್ಮೀಕಿಯನ್ನು ಆದಿಕವಿ ಎಂದು ಹೇಳುತ್ತಾರೆ.

ಕತೆಯಿಂದ ತಿಳಿದು ಬರುವಂತೆ ಶ್ರೀರಾಮನು ವನವಾಸ ಮುಗಿಸಿ ಅಯೋಧ್ಯೆಗೆ ಮರಳಿ ರಾಜ್ಯಭಾರ ಮಾಡುತ್ತಿರುವಾಗ ಅಗಸರವನೊಬ್ಬನು ಸೀತೆಗೆ ಅಪವಾದ ಹೊರಿಸಿದ "ಸೀತೆ ರಾವಣನ ಹತ್ತಿರ ಇದ್ದವಳು. ಆಕೆ ಅಪವಿತ್ರೆ. ರಾಮನು ಆಕೆಯನ್ನು ಹತ್ತಿರ ಇರಿಸಿಕೊಳ್ಳಲಾಗದು.''

ಇದನ್ನು ಕೇಳಿದ ರಾಮ ಬಹಳ ದುಃಖಿತನಾದ. ರಾಜನಾದುದರಿಂದ ಗೌರವವನ್ನು ಉಳಿಸಿಕೊಳ್ಳಬೇಕಾಗಿತ್ತು. ಆತ ಸೀತೆಯನ್ನು ಕಾಡಿಗೆ ಕಳುಹಿಸಿದ. ಆಗ ಸೀತೆ ಮಹರ್ಷಿ ವಾಲ್ಮೀಕಿಯ ಆಶ್ರಮದಲ್ಲಿ ವಾಸಿಸಿದಳು. ಇಲ್ಲೇ ಲವಕುಶ ಇವರ ಜನನವಾಯಿತು. ಮಹರ್ಷಿ ವಾಲ್ಮೀಕಿ ಅವರಿಗೆ ಎಲ್ಲ ವಿದ್ಯೆಗಳನ್ನೂ ಕಲಿಸಿದ. ರಾಮಾಯಣವನ್ನು ಆಗಲೇ ವಾಲ್ಮೀಕಿ ರಚಿಸಿದ್ದ, ಅದನ್ನು ಆ ಹುಡುಗರಿಗೆ ಬಾಯಿಪಾಠ ಕಲಿಸಿದ.

ಸೀತೆ – ರಾಮರನ್ನು ಒಟ್ಟು ಸೇರಿಸಲು ವಾಲ್ಮೀಕಿಯು ಬಹಳ ಪ್ರಯತ್ನ ಮಾಡಿದ. ಆದರೆ ಸಫಲವಾಗಲಿಲ್ಲ. ಎಲ್ಲರೂ ತಿಳಿದಿರುವಂತೆ ಸೀತೆ ನೆಲ ಬಿರಿದು ನೆಲಕ್ಕೆ ಸೇರಿಕೊಂಡಳು. ಆಗ ವಾಲ್ಮೀಕಿಯು ರಾಮನ ಮಕ್ಕಳನ್ನು ಆತನಿಗೊಪ್ಪಿಸಿ ತಾನು ಆಶ್ರಮದಲ್ಲಿ ವಾಸಿಸತೊಡಗಿದ.

ವಾಲ್ಮೀಕಿ ಒಬ್ಬನಿರಬಹುದು ಅಥವಾ ಅನೇಕರಿರಲಿ; ಪ್ರಯತ್ನಪಟ್ಟರೆ ಬಹಳ ಕೆಟ್ಟ ಮನುಷ್ಯನೂ ತುಂಬ ಒಳ್ಳೆಯವನಾಗಬಹುದೆಂಬ ಸತ್ಯ ಈ ಕತೆಯಿಂದ ತಿಳಿಯುತ್ತದೆ. ರಾಮಾಯಣವು ಜಗತ್ತಿನಲ್ಲಿ ಪ್ರಸಿದ್ಧಿ ಪಡೆದಿರುವ ತನಕ ವಾಲ್ಮೀಕಿಯನ್ನೂ ಯಾರೂ ಮರೆಯಲಾರರು.

---

(ವಿವಿಧ ಮೂಲಗಳಿಂದ)



## ಶ್ರೀ ಪದ್ಮಾವತೀ ದೇವಾಲಯ



### ಅರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಪದ್ಮಾವತೀದೇವಿಗೆ ಪ್ರತಿ ಶುಕ್ರವಾರವೂ ಅರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ವ್ಯಕ್ತಿಗಳು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಯತಿ ಸೇವೆ

ಮು. ಕೃಷ್ಣಪ್ಪ

ಹಿಮಾಲಯದ ತಪ್ಪಲಲ್ಲಿ ಭಗವಾನ್ ಪಿಪ್ಪಲಾದರ ಆಶ್ರಮ. ಸದಾ ಪ್ರಜ್ವಲಿಸುತ್ತಿರುವ ಹೋಮಾಗ್ನಿ. ತಮ್ಮ ಸಹಜ ವೈರವನ್ನೂ ಬಿಟ್ಟು ಒಂದೇ ತಾಯ ಮಕ್ಕಳಂತಿರುವ ಪ್ರಾಣಿ ಸಮೂಹ, ಸರ್ವ ಋತುಗಳೂ ಒಂದೇ ಋತುವಿನಂತಿರುವ ಪ್ರಕೃತಿಯಲ್ಲಿ ಎಲ್ಲೆಲ್ಲೂ ಕಾಣುವ ಸುಂದರ ನಾನಾ ವಿಧವಾದ ಮೊಗ್ಗು, ಹೂಗಳು. ತೊಟ್ಟು ಕಳಚಿ ನೆಲಕ್ಕೆ ಬಿದ್ದ ಹೂಗಳೂ ಬಾಡದೆ, ಕಂಪನ್ನೂ ಕಳೆದುಕೊಳ್ಳದೆ ಹೂಹಾಸಿಗೆ ಹಾಸಿದಂತೆ ಹರಡಿಕೊಂಡಿವೆ. ನಾನಾ ಜಾತಿಯ ತರುಗಳು ಹೂ ಮಿಡಿ ಕಾಯಿ ಹಣ್ಣುಗಳನ್ನು ಒಟ್ಟೊಟ್ಟಿಗೇ ಹೊತ್ತು ನಿಂತು, ಅತಿಥಿಗಳಿಗೆ ಕೋರಿದ ಫಲಗಳನ್ನು ನೀಡಲು ಬದ್ಧರಾಗಿದ್ದೇವೆ ಹಾಗೂ ಸಿದ್ಧರಾಗಿಯೂ ಇದ್ದೇವೆ ಎಂದು ಕೈಚಾಚಿ ಕೊಡುತ್ತಿರುವಂತಿರುವ ಕಲ್ಪವೃಕ್ಷಗಳಂತಿವೆ. ಪ್ರಕೃತಿಗೆ. ಹೊಸ ಚೈತನ್ಯ ಬಂದು ನವ ವಧುವಿನಂತೆ ನಗುತ್ತಿರುವಂತಿದೆ. ನಾನಾ ಜಾತಿಯ ಪಕ್ಷಿಗಳು ವೇದ ಘೋಷದಷ್ಟೇ ಇಂಪಾಗಿ ತಮ್ಮ ಮಧುರ ಕಂಠಗಳಿಂದ ಸಾಮ ವೇದೋಚ್ಚಾರಣೆ ಮಾಡುತ್ತಿರುವಂತಿದೆ. ಇದಕ್ಕೆಲ್ಲ ಕಾರಣ ಇಳೆಯ ತಪೋರಾಶಿಯೆಲ್ಲ ಭಗವಾನರ ಆಶ್ರಮದಲ್ಲಿ ಒಂದುಕಡೆ ಸೇರುತ್ತಿರುವ ಮಹೋನ್ನತ ಸನ್ನಿವೇಶ.—

ಅಂದು ವಿಶ್ವಾಮಿತ್ರರನ್ನು ಬ್ರಹ್ಮಋಷಿಗಳೆಂದು ಸಮಸ್ತ ಋಷಿಗಳ ಸಮ್ಮುಖದಲ್ಲಿ ಅಂಗೀಕರಿಸಿ ಅವರನ್ನು ಸನ್ಮಾನಿಸಲೆಂದು ಏರ್ಪಡಿಸಿದ್ದ ಸಮಾರಂಭ. ಮಹಾತಪಸ್ವಿಗಳಾದ ಮಹರ್ಷಿಗಳೆಲ್ಲ ಕಾಲಕ್ಕೆ ಸರಿಯಾಗಿ ಬಂದು ಸಭೆಯಲ್ಲಿ ಮಂಡಿಸಿದ್ದಾರೆ. ಅವರ ತಪಃ ಪ್ರಭೆ ದೇದೀಪ್ಯಮಾನವಾಗಿದ್ದರೂ, ತೀಕ್ಷ್ಣವಾಗಿರದೆ ಶಾಂತವಾಗಿ ಬೆಳಗುತ್ತಿದೆ. ತುಸು ಎತ್ತರವಾದ ವೇದಿಕೆಯಲ್ಲಿ ಕೃಷ್ಣಾಜಿನಗಳನ್ನು ಹಾಸಿ ಸಿದ್ಧಪಡಿಸಿದ್ದಾರೆ. ಆ ಸಮಾರಂಭದ ಸಭಾಪತಿ ಪೀಠವನ್ನು ಅಲಂಕರಿಸಿ ಸಮಾರಂಭವನ್ನು ನಡೆಸಿಕೊಡಬೇಕೆಂದು ಋಷಿಗಣದ ಪರವಾಗಿ ಭಗವಾನ್ ಪಿಪ್ಪಲಾದರು, ಬ್ರಹ್ಮಋಷಿಗಳೂ ಸಪ್ತಋಷಿಗಳಲ್ಲಿ ಒಬ್ಬರೂ ಆದ ವಶಿಷ್ಠರನ್ನು ಕೇಳಿಕೊಂಡರು. ಭಗವತಿ ಕೌಶಿಕೆಯರು ಭಗವಾನರ ಅಭಿಪ್ರಾಯವನ್ನು ಸಮರ್ಥಿಸಿದರು. ಇಡೀ ಋಷಿಗಣವೆಲ್ಲ ಅದಕ್ಕೆ ತಮ್ಮ ಒಮ್ಮತದ ಅಂಗೀಕಾರವನ್ನು ಸಂತೋಷದಿಂದ ಸೂಚಿಸಿದರು. ಸಮಸ್ತರ ಆಹ್ವಾನಕ್ಕೆ ತಲೆಬಾಗಿ ಆ ಬೆಳ್ಳಿಗೂದಲ ಜಟಾಜೂಟಧಾರಿ ಭಗವಾನ್ ವಶಿಷ್ಠರು ಎದ್ದು ನಿಂತಾಗ ಹಿಮಗಿರಿಯೇ ಎದ್ದು ನಿಂತಾಯಿತು.

ಸಭಾಪತಿ ಪೀಠವನ್ನಲಂಕರಿಸಿದ ವಶಿಷ್ಠರು ತಮ್ಮ ಪಕ್ಕದ ಆಸನಕ್ಕೆ ವಿಶ್ವಾಮಿತ್ರರನ್ನು ಆಹ್ವಾನಿಸಿದಾಗ ಇಡೀ ಸಭೆಯೇ ಸಂತೋಷದಿಂದ ವಿಶ್ವಾಮಿತ್ರರಿಗೆ ಜಯಕಾರ ಮಾಡಿತು. ವಿಶ್ವಾಮಿತ್ರರು ಅವರೆಲ್ಲರ ಆದರಾಭಿಮಾನಗಳಿಗೆ ಸಂತಸಗೊಂಡು ವಶಿಷ್ಠರ ಪಕ್ಕದಲ್ಲಿ ಮಂಡಿಸಿದರು. ಸಭೆ ವೇದ ಪಠಣದೊಂದಿಗೆ ಪ್ರಾರಂಭವಾಯಿತು. ಭಗವಾನ್ ಪಿಪ್ಪಲಾದರು ಎದ್ದುನಿಂತು, ಸಭಾಪತಿಗಳ ಅನುಮತಿ ಪಡೆದು ವಿಶ್ವಾಮಿತ್ರರ ತಪಸ್ಸು ಮತ್ತು ಸಾಧನೆಗಳನ್ನು ನೆನೆಯುತ್ತ — "ಇದುವರೆವಿಗೂ ಜನ್ಮದಿಂದ ಬ್ರಾಹ್ಮಣನಾದ ಹೊರತು ಬ್ರಹ್ಮವನ್ನು ಅರಿಯಲಾಗಲಿ, ಯಜ್ಞಯಾಗಾದಿಗಳಲ್ಲಿ ಭಾಗವಹಿಸಲಾಗಲೀ ಸಾಧ್ಯವಿರಲಿಲ್ಲ. ಬ್ರಾಹ್ಮಣ್ಯವಿಲ್ಲದೆ ಬ್ರಹ್ಮಸಾಕ್ಷಾತ್ಕಾರವಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ವಿಶ್ವಾಮಿತ್ರರು ತಮ್ಮ ಹೆಸರನ್ನು ಸಾರ್ಥಕ ಪಡಿಸಿಕೊಂಡು ವಿಶ್ವಕ್ಕೇ ಮಿತ್ರರಾಗಿದ್ದಾರೆ. ಜನ್ಮತಃ ಕ್ಷತ್ರಿಯರಾದರೂ ಹಠದಿಂದ ಗಾಯತ್ರೀದೇವಿಯ ಅನುಗ್ರಹ ಪಡೆದು ತಾವೂ ಬ್ರಾಹ್ಮಣ್ಯವನ್ನು ಪಡೆದು ವಿಶ್ವಕ್ಕೂ ಬ್ರಾಹ್ಮಣ್ಯ ಪಡೆಯುವ ಸುಯೋಗವನ್ನು ದೊರಕಿಸಿಕೊಟ್ಟಿದ್ದಾರೆ. ಈ ಶುಭ ಸಂದರ್ಭದಲ್ಲಿ ನಾವು ಅವರಿಗೆ ನಮ್ಮ ತಪಸ್ಸಿನ ಅರ್ಧ ಭಾಗವನ್ನು ಕಾಣಿಕೆಯಾಗಿ ಅರ್ಪಿಸುತ್ತಿದ್ದೇವೆ." ಎಂದು ತಮ್ಮ ತಪಸ್ಸಿನ ಅರ್ಧಭಾಗವನ್ನು ಶಾಸ್ತ್ರೋಕ್ತವಾಗಿ ಧಾರೆ ಎರೆದರು. ಅಲ್ಲಿ ಸೇರಿದ್ದ ಸಮಸ್ತ ಋಷಿಗಳೂ ಅವರವರ ಯೋಗ್ಯತಾನುಸಾರವಾಗಿ ತಂತಮ್ಮ ತಪಸ್ಸಿನ ಅಷ್ಟಷ್ಟು ಭಾಗವನ್ನು ಅರ್ಪಿಸಿದರು. ಕಡೆಯದಾಗಿ ಸಭಾಪತಿ ವಶಿಷ್ಠರು ಎದ್ದು ನಿಂತು, ವಿಶ್ವಾಮಿತ್ರರ ಸಾಧನೆಯ ಬಗ್ಗೆ ಮೆಚ್ಚಿಗೆ ಸೂಚಿಸಿ ತಮ್ಮ ಕಾಣಿಕೆಯಾಗಿ ನಾನು ಮಾಡಿರುವ "ಯತಿಸೇವೆ"ಯ ನಾಲ್ಕನೇ ಒಂದು ಭಾಗವನ್ನು ವಿಶ್ವಾಮಿತ್ರರಿಗೆ ಅರ್ಪಿಸುತ್ತಿದ್ದೇನೆ ದಯಮಾಡಿ ಸ್ವೀಕರಿಸಬೇಕು ಎಂದು ಹೇಳುತ್ತಿರುವಂತೆಯೇ ಪ್ರಳಯಾಗ್ನಿಯಂತೆ ಒಮ್ಮೆಲೇ ವಿಜೃಂಭಿಸಿದ ವಿಶ್ವಾಮಿತ್ರರು ದಿಗ್ಗನೆದ್ದು—

"ಇಷ್ಟು ಜನ ಋಷಿಗಳು ತಮ್ಮ ತಪಸ್ಸಿನ ಅಷ್ಟಷ್ಟು ಭಾಗಅರ್ಪಿಸುತ್ತಿದ್ದರೆ ಅವರ ತೃಪ್ತಿಗಾಗಿ ಸ್ವೀಕರಿಸುತ್ತಿದ್ದೆ. ನನಗೂ ಅಖಂಡವಾದ ತಪಃ ಭಂಡಾರವಿದೆ. ಸೃಷ್ಟಿಗೇ ಪ್ರತಿಸೃಷ್ಟಿಯನ್ನು ಸೃಷ್ಟಿಸಬಲ್ಲ ಈ ವಿಶ್ವಾಮಿತ್ರನಿಗೆ, ಭಿಕ್ಷುಕರಿಗೆ ಕೊಡುವಂತೆ ವಶಿಷ್ಠರು ತಾವು ಮಾಡಿದ 'ಯತಿಸೇವೆ'ಯ—ಅದರಲ್ಲೂ ನಾಲ್ಕನೇ ಒಂದು ಭಾಗದ ಫಲವನ್ನು ಸ್ವೀಕರಿಸುವಷ್ಟು ದರಿದ್ರಸ್ಥಿತಿಯೇನು ಬಂತು. ನನ್ನನ್ನು ಇಷ್ಟು ಕೀಳುದೃಷ್ಟಿಯಿಂದ ಕಂಡಂತಹ ವಶಿಷ್ಠರ ಮತ್ತು ನನ್ನ ತಪೋಬಲಗಳ ತರತಮಗಳು ಇದೇ ಸಭೆಯಲ್ಲೇ ತೀರ್ಮಾನವಾಗಿ ಬಿಡಲಿ" ಎಂದು ಗುಡುಗಿನಂತೆ ಅರ್ಭಟಿಸಿ ಕುಳಿತರು.

ಸಭೆಯಲ್ಲಿ ಗುಜು ಗುಜು ಆರಂಭವಾಯಿತು. ಸಂತಸದಾಯಕವಾಗಿದ್ದ ವಾತಾವರಣ ಕೆಟ್ಟಿ ಇದು ಎಲ್ಲಿಗೆ ಮುಟ್ಟುವುದೋ ಎಂದು ಹೆದರುವಂತಾಯಿತು. ಭಗವಾನ್ ಪಿಪ್ಪಲಾದರಿಗೆ ದಿಕ್ಕು ತೋಚದಾಯಿತು. ಸಪ್ತಋಷಿಗಳಲ್ಲೊಬ್ಬರು. ಮತ್ತೊಬ್ಬರು ಪ್ರತಿಸೃಷ್ಟಿ ಮಾಡಲು ಹೊರಟ ಬ್ರಹ್ಮರ್ಷಿಗಳು. ಸ್ವಲ್ಪ ಹೊತ್ತು ಯೋಚಿಸಿದ ಬಳಿಕ ಅಗ್ರಾಸನಗಳಲ್ಲೊಂದರಲ್ಲಿ ಕುಳಿತಿದ್ದ ನಾರದ ಮಹರ್ಷಿಗಳೇ ಇದಕ್ಕೆ ಪರಿಹಾರ ಸೂಚಿಸಬಲ್ಲರೆಂದು ನಾರದರ್ಷಿಗಳನ್ನು ಕುರಿತು—

"ಸರಸ್ವತೀ ಪುತ್ರರೂ ತ್ರಿಕಾಲಜ್ಞಾನಿಗಳೂ ತ್ರಿಲೋಕ ಸಂಚಾರಿಗಳೂ ಆದ ನೀವೇ ಇದಕ್ಕೆ ಪರಿಹಾರ ಮಾರ್ಗವನ್ನು ಸೂಚಿಸಬೇಕು" ಎಂದರು, ಅದಕ್ಕೆ ನಾರದರ್ಷಿಗಳು — ಸಭೆಗೆ ಸಭಾಪತಿಗಳಿಗೆ ವಂದಿಸಿ—

"ಇದನ್ನು ತೀರ್ಮಾನಿಸಲು ನನ್ನಿಂದ ಸಾಧ್ಯವಿಲ್ಲ. ಆದರೆ ಇದನ್ನು ತೀರ್ಮಾನಿಸ ಬಲ್ಲಂತಹವರು ನಾಲ್ವರಿದ್ದಾರೆ—ಸೂರ್ಯದೇವ, ವಾಯುದೇವ, ಆದಿಶೇಷ, ಅಗಸ್ತ್ಯಮುನಿಗಳು. ಈ ನಾಲ್ವರಲ್ಲಿ ಯಾರನ್ನಾದರೂ ಕರೆದುತಂದರೆ ಅವರು ತೀರ್ಮಾನಿಸಬಲ್ಲರು" ಎಂದು ಸಭೆಗೆ ನಮಸ್ಕರಿಸಿ ಕುಳಿತರು.

ಮತ್ತೆ ಪ್ರಾರಂಭವಾಯಿತು ಗುಜು ಗುಜು; ಯಾರು ಕರೆದು ತರಬೇಕು ? ಯಾರನ್ನು ಕಳುಹಿಸುವುದು ? ಎಂದು. ಆಗ ವಿಶ್ವಾಮಿತ್ರರು ಯೋಚಿಸಲಾರಂಭಿಸಿದರು. ಸೂರ್ಯ ಇಕ್ಷ್ವಾಕು ವಂಶದ ಮೂಲ ಪುರುಷ, ವಶಿಷ್ಠರು ಆ ಕುಲಕ್ಕೆ ಕುಲಪುರೋಹಿತರು. ಈಗ ವಶಿಷ್ಠರೇ ಹೋಗಿ ಕರೆದರೆ ಸೂರ್ಯ ವಶಿಷ್ಠರ ಪರವಾಗಿಯೇ ತೀರ್ಪು ನೀಡಬಹುದು, ಇನ್ನು ಉಳಿದ ಮೂವರೂ ವಶಿಷ್ಠ ಪಕ್ಷಪಾತಿಗಳೇ ಆಗಬಹುದು. ಅದ್ದರಿಂದ ನಾನೇ ಹೋಗಿ ಅವರಿಗೆ ಕೂಲಂಕಷವಾಗಿ ತಿಳಿಯಹೇಳಿ ಕರೆತರುವುದೊಳಿತೆಂದು ಯೋಚಿಸಿ "ನಾನೇ ಆ ನಾಲ್ವರನ್ನೂ ಕರೆ ತರುತ್ತೇನೆ" ಎಂದು ಸಭೆಗೆ

ತಿಳಿಸಿ ಮೊದಲು ಸೂರ್ಯದೇವನನ್ನೇ ಕೇಳೋಣ ವೆಂದು ರವಿ ಮಂಡಲವನ್ನು ಪ್ರವೇಶಿಸಿ ಸೂರ್ಯ ದೇವನನ್ನು ಕುರಿತು–

"ಹೇ ಸೂರ್ಯ ದೇವ! ವಶಿಷ್ಠರ ಮತ್ತು ನನ್ನ ನಡುವೆ ಯಾರ ತಪೋಬಲ ಹೆಚ್ಚು ಎಂಬುದನ್ನು ತೀರ್ಮಾನಿಸಲು ನೀನು ಬರ ಬೇಕು" ಎಂದು ಲೋಕಮಿತ್ರನನ್ನು ವಿಶ್ವಾಮಿತ್ರರು ಪ್ರಾರ್ಥಿಸಲು ಸೂರ್ಯ ದೇವನು,

"ವಿಶ್ವಾಮಿತ್ರರೇ ನಾನು ಬರಲು ಅಭ್ಯಂತರ ವೇನೂ ಇಲ್ಲ. ಆದರೆ ನಾನು ನಿರ್ವಹಿಸುತ್ತಿರುವ ಕರ್ತವ್ಯದಿಂದ ನಿವೃತ್ತನಾದರೆ ಲೋಕಗಳಲ್ಲಿ ಉಲ್ಲೋಲ ಕಲ್ಲೋಲವಾಗುವುದೇ ಅಲ್ಲದೆ ಸೃಷ್ಟಿ ನಿಯತಿಗೆ ವ್ಯತಿರೇಕವಾಗುತ್ತದೆ. ಆದ್ದರಿಂದ ನೀವಾಗಲಿ ನಿಮ್ಮ ತಪೋಬಲವಾಗಲಿ ಈ ಕೆಲಸ ವನ್ನು ನಿರ್ವಹಿಸುವುದಾದರೆ ಬರುತ್ತೇನೆ" ಎಂದು ನುಡಿಯಲು ವಿಶ್ವಾಮಿತ್ರರಿಗೆ ಮೈ ಪರಚಿ ಕೊಳ್ಳುವಂತಾಗ ತೊಡಗಿತು. ಹೇಗಾದರೂ ಈತ ವಶಿಷ್ಠ ಪಕ್ಷಪಾತಿ. ಬರದೇ ಇರುವುದೇ ಒಳ್ಳೆಯ ದಾಯಿತೆಂದು ಯೋಚಿಸಿ, ವಾಯುದೇವನ ಬಳಿಗೆ ಹೊರಟರು. ವಾಯುಮಂಡಲವನ್ನು ಸೇರಿ ವಾಯುದೇವನನ್ನು ಕುರಿತು–

"ಹೇ ಪ್ರಾಣದೇವ! ದಯಮಾಡಿ ಬಂದು ನಮ್ಮೀ ಸಮಸ್ಯೆಯನ್ನು ಪರಿಹರಿಸಬೇಕೆ"ಂದು ಪ್ರಾರ್ಥಿಸಿ ಬಂದ ವಿಷಯವನ್ನು ವಿವರಿಸಿದರು.

ಅದಕ್ಕೆ ವಾಯುದೇವನು–

"ಪೂಜ್ಯರೇ, ನಾನು ಒಂದು ಕ್ಷಣ ನನ್ನ ಚಲನೆ ಯನ್ನು ನಿಲ್ಲಿಸಿದರೆ ಇಡೀ ವಿಶ್ವದ ಪ್ರಾಣ ವ್ಯಾಪಾರವೇ ನಿಂತು ಸಮಸ್ತ ಜೀವಿಗಳೂ ಸಾಯುತ್ತವೆ. ಈ ಕೆಲಸವನ್ನು ಯಾರಾದರೂ ನಿರ್ವಹಿಸಿದರೆ ಬರುತ್ತೇನೆ" ಎನ್ನಲು–

ವಿಶ್ವಾಮಿತ್ರರಿಗೆ ಕೋಪಾಧಿಕ್ಯವಾಗಲಾರಂಭಿಸಿತು.

"ಛೆ ನಾನು ಇಲ್ಲಿಗೆ ಬಂದದ್ದೇ ತಪ್ಪಾಯಿತು. ಶಾಂತ ಮೂರ್ತಿ ವಿವೇಚನಾ ಪ್ರಜ್ಞೆಯುಳ್ಳ ಆದಿ ಶೇಷನೇ ಸರಿ" ಎಂದು ಶೇಷನಲ್ಲಿಗೆ ಹೋಗಿ

"ಆದಿ ದೇವನ ಹಾಸಿಗೆಯಾಗಿ ಭೂಲೋಕ ವನ್ನು ಹೊರುವಂತಹ ಶಕ್ತಿಶಾಲಿಯಾದ ಆದಿ ಶೇಷ, ದಯಮಾಡಿ ನಮ್ಮ ಸಮಸ್ಯೆಯನ್ನು ತೀರ್ಮಾನಿಸಲು ಬರಬೇಕೆ"ಂದು ಅಲ್ಲೂ ತಾವು ಬಂದ ವಿಷಯವನ್ನು ತಿಳಿಸಲು.

ಆದಿಶೇಷನು–

"ಮಹಾಮುನಿ ನನ್ನ ಸ್ಥಿತಿ ನಿಮಗೆ ಚೆನ್ನಾಗಿ ಗೊತ್ತೇ ಇದೆ. ತಲೆಯ ಮೇಲಿರುವ ಈ ಭೂಭಾರವನ್ನು ಎತ್ತ ಇಳಿಸಲಿ? ಇದನ್ನು ನೀವಾಗಲಿ ನಿಮ್ಮ ತಪೋಬಲವಾಗಲಿ ಹೊರುವುದಾದರೆ ಬರುತ್ತೇನೆ" ಎಂದನು.

ತಾಳ್ಮೆಯ ಪರಮಾವಧಿಯನ್ನು ಮುಟ್ಟಿದ್ದ ವಿಶ್ವಾಮಿತ್ರರು

"ಛೀ ಛೀ ದೇವತೆಗಳಾದ ನೀವೆಲ್ಲ ಇಷ್ಟೇ, ಜಂಭದವರು. ನಿಮ್ಮ ನೆರವಾಗಲೇ ಬೇಡ, ಮನುಷ್ಯರಾಗಿ ಹುಟ್ಟಿ ಮನುಷ್ಯರ ಮನೋಭಾವನೆಗಳನ್ನು ಅರ್ಥ ಮಾಡಿ ಕೊಳ್ಳುವಂತಹ ಅಗಸ್ತ್ಯರ ಬಳಿಗೆ ಹೋಗುತ್ತೇನೆ" ಎಂದು ಹೇಳಿ ಆದಿಶೇಷನಿಗೆ ಹೇಳದೆ ಕೇಳದೆ ಹೊರಟು ಬಂದರು.

ಲೋಪಾಮುದ್ರಾದೇವಿಯ ಬಳಿಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದ ಅಗಸ್ತ್ಯಮುನಿಗಳಲ್ಲಿಗೆ ಬಂದ ವಿಶ್ವಾಮಿತ್ರರಿಗೆ;

ವಯೋವೃದ್ಧರು ಜ್ಞಾನ ವೃದ್ಧರೂ ಆದ ಆ ದಂಪತಿಗಳನ್ನು ಕಂಡು ಪಾರ್ವತೀ ಪರಮೇಶ್ವರರನ್ನು ಕಂಡಷ್ಟೇ ಸಂತೋಷವಾಯಿತು.

ಆಶ್ರಮಕ್ಕೆ ಬಂದ ಅತಿಥಿ ವಿಶ್ವಾಮಿತ್ರರನ್ನು ಆದರಿಸಿ ಸತ್ಕರಿಸಿದ ನಂತರ ಬಂದ ಕೆಲಸವೇನೆಂದು ಕೇಳಿದ ಅಗಸ್ತ್ಯರಿಗೆ ವಿಶ್ವಾಮಿತ್ರರು.

"ಹೇ ಭಗವಾನ್! ವಶಿಷ್ಠರ ಮತ್ತು ನನ್ನ ತಪಸ್ಸಿನಲ್ಲಿ ಯಾರದು ಹೆಚ್ಚು ಎಂಬುದನ್ನು ತೀರ್ಮಾನಿಸಲು ತಾವು ಭಗವಾನ್ ಪಿಪ್ಪಲಾದರ ಆಶ್ರಮಕ್ಕೆ ಬರಬೇಕು. ನಿಮ್ಮನ್ನು ಕರೆದು ತರುವುದಾಗಿ ಸಭೆಗೆ ತಿಳಿಸಿ ಬಂದಿರುವುದರಿಂದ ನೀವು ಬರಲೇ ಬೇಕು" ಎಂದು ಬಿನ್ನೈಸಿದರು.

ಸಭೆ ಮತ್ತು ಸಭೆಯ ಉದ್ದೇಶವನ್ನು ಕೇಳಿ ತಿಳಿದು ಕೊಂಡ ಅಗಸ್ತ್ಯರು ಸಂತೋಷ ವೇನೋ ಪಟ್ಟರು. ಆದರೆ ಕಡೆಯಲ್ಲಿ,

"ವಿಶ್ವಾಮಿತ್ರರೇ ಈ ವಯಸ್ಸಿನಲ್ಲೂ ಆ ಸಮಾರಂಭಕ್ಕೆ ಬರಲು ನನಗೆ ಇಷ್ಟವಿತ್ತು. ಭಗವಾನ್ ಪಿಪ್ಪಲಾದರು ಕಳುಹಿಸಿದ ಆಹ್ವಾನವೂ ಸೇರಿತು. ಆದರೆ ನಾನು ಅಸಹಾಯಕನಾಗಿದ್ದೇನೆ. ಏಕೆಂದರೆ, ಹಿಂದೆ ಪಾರ್ವತೀ ಪರಮೇಶ್ವರರ ವಿವಾಹ ಹಿಮಾಲಯದಲ್ಲಿ ಆದಾಗ ದೇವಾಧಿದೇವತೆಗಳೆಲ್ಲ ಅಲ್ಲಿ ಸೇರಲು ಭೂಮಿಯ ತೂಕ ಉತ್ತರಕ್ಕೆ ಹೆಚ್ಚಾಗಿ ಆಯತಪ್ಪಿ ಬೀಳುವಂತಾಗಲು, ಪರಮೇಶ್ವರನು ನನ್ನನ್ನು ದಕ್ಷಿಣದ ಕಡೆಗೆ ಹೋಗುವಂತೆ ಆಜ್ಞಾಪಿಸಿದನು. ನಾನು ದಕ್ಷಿಣಕ್ಕೆ ಬಂದ ಮೇಲೆ ಭೂಮಿಯ ಆಯವನ್ನು ನನ್ನ ತೂಕದಿಂದ ಸರಿಪಡಿಸಿದೆ. ಈಗ ನಾನು ಉತ್ತರಕ್ಕೆ ಬಂದರೆ ಮತ್ತೆ ಆಯತಪ್ಪುತ್ತದೆ. ಆದ್ದರಿಂದ ಈ ಭೂ ಆಯವನ್ನು ಕಾಯ್ದು ಕೊಳ್ಳುವವರಾರಾದರೂ ಇದ್ದರೆ ನಾನು ಖಂಡಿತವಾಗಿಯೂ ಬರುತ್ತೇನೆ" ಎಂದು ಹೇಳಿದರು.

ಅಷ್ಟರಲ್ಲಾಗಲೇ ವಿಶ್ವಾಮಿತ್ರರ ಅಜ್ಞಾನದ ಪೊರೆ ಕಳಚಿಕೊಳ್ಳಲಾರಂಭಿಸಿತ್ತು. ಸೋತ ಮುಖ ಹೊತ್ತು ಪಿಪ್ಪಲಾದ ಋಷಿಗಳ ಆಶ್ರಮಕ್ಕೆ ಹಿಂದಿರುಗಿ ಸಭೆಗೆ, ಅವರಾರನ್ನೂ ಕರೆದು ತರಲಾಗಲಿಲ್ಲ; ವಶಿಷ್ಠರೇ ಕರೆದು ಕರಲಿ ಎಂದು ತಿಳಿಸಿ ಕುಳಿತುಬಿಟ್ಟರು.

ವಶಿಷ್ಠರು ಸಭೆಗೆ ವಂದಿಸಿ, ತಾವು ಮಾಡಿದ ಯತಿಸೇವೆಯ ನಾಲ್ಕನೇ ಒಂದು ಭಾಗವನ್ನು ಸೂರ್ಯ ದೇವನ ಬದಲಿಗೆ ಕರ್ತವ್ಯ ನಿರ್ವಹಿಸುವಂತೆ ಸಂಕಲ್ಪಿಸಲು, ಆ ಯತಿಸೇವೆಯ ಕಾಲು ಭಾಗದ ಮಹಿಮೆ ತೋರಿ ಸೂರ್ಯನಂತೆ ಪ್ರಕಾಶಮಾನವಾಗಿ ಬೆಳಗಿ ಸೂರ್ಯ ದೇವನ ಕಾರ್ಯವನ್ನು ನಿರ್ವಹಿಸಲು ಸೂರ್ಯ ದೇವನು ಸಭೆಯಲ್ಲಿ ಬಂದು ನಿಂತನು. ಹಾಗೆಯೇ ವಶಿಷ್ಠರ ಯತಿ ಸೇವೆಯ ಉಳಿದ ಮೂರು ಭಾಗಗಳು ವಾಯುದೇವನ ಬದಲಿಗೆ ವಾಯುವಿನಂತೆ ಬೀಸಿದರೆ, ಆದಿಶೇಷನ ಬದಲಿಗೆ ಭೂಭಾರವನ್ನು ಹೊತ್ತು, ಅಗಸ್ತ್ಯರ ಬದಲಿಗೆ ಭೂಮಿಯ ತೂಕದ ಆಯವನ್ನು ಕಾಪಾಡಿಕೊಂಡವು. ನಾಲ್ಕು ಜನವೂ ಸಭೆಯಲ್ಲಿ ಬಂದು ಸೇರಿದರು, ಅಷ್ಟೊತ್ತಿಗಾಗಲೇ ವಿಶ್ವಾಮಿತ್ರರ ಅಹಂ ಪೊರೆ ಕಳಚಿ ಬಿದ್ದಿತ್ತು. ಸತ್ಯ ದರ್ಶನವೂ ಆದರಿಂದಾಗಿ, ಸೂರ್ಯ, ವಾಯು, ಆದಿಶೇಷ ಅಗಸ್ತ್ಯರ ತೀರ್ಮಾನದ ಅವಶ್ಯಕತೆಯೇ ಇಲ್ಲದೆ ಆಯಿತು–ಆಗ ವಶಿಷ್ಠರೇ ಎದ್ದು ನಿಂತು ವಿಶ್ವಾಮಿತ್ರರನ್ನು ಸಮಾಧಾನ ಪಡಿಸಿ;

"ವಿಶ್ವಾಮಿತ್ರರೇ ನಿಮ್ಮ ತಪೋಬಲ ಕಡಿಮೆಯಾದದ್ದೇನೂ ಅಲ್ಲ. ಈಗ ಬ್ರಹ್ಮಋಷಿಯಾಗಿರುವಿರಿ ಮುಂದೆ ಋಷಿ ಮಂಡಲದಲ್ಲಿ ಸ್ಥಾನ ಪಡೆಯಲು ಈಗ ನಡೆದ ಘಟನೆ ಪೂರ್ವಭಾವಿ ಸಿದ್ಧತೆ ಇದ್ದಂತೆ. ಇದೆಲ್ಲ ಲೀಲಾಮಯನ ಲೀಲೆ ಅಷ್ಟೇ" ಎಂದರು. ಭಗವಾನ್ ಪಿಪ್ಪಲಾದರಿಗೂ ಎಷ್ಟೋ ಸಂತೋಷವಾಯಿತು. ಸಭೆ ಸಂತೋಷದಲ್ಲಿ ಮುಕ್ತಾಯವಾದುದಕ್ಕೆ ಸಭೆ ಮುಗಿದ ಮೇಲೆ ಅತಿಥಿಗಳಿಗೆಲ್ಲ ಭೋಜನ ಮಾಡಿಸಿ ಬಿಳ್ಕೊಟ್ಟರು.



# ವಾರ್ತಾಲಹರಿ

( 3ನೇಯ ಪುಟದಿಂದ )

## ದಾಸ ಸಾಹಿತ್ಯೋತ್ಸವ

ರಾಯಚೂರಿನ ಶ್ರೀ ರಾಘವೇಂದ್ರ ಕಲ್ಯಾಣ ಮಂಟಪದಲ್ಲಿ ಹಿಂದಿನ ಡಿಸೆಂಬರ್ 19 ರಿಂದ 21 ರವರೆಗೆ ಮೂರುದಿನಗಳ ಕಾಲ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, ತಿರುಪತಿಯ ದಾಸ ಸಾಹಿತ್ಯ ಪ್ರಾಜೆಕ್ಟ್, ಹಾಗೂ ರಾಯಚೂರಿನ ದಾಸಸಾಹಿತ್ಯೋತ್ಸವ ಸಮಿತಿಗಳ ಸಂಯುಕ್ತ ಆಶ್ರಯದಲ್ಲಿ ಹ ರಿ ದಾ ಸ ಸಾಹಿತ್ಯೋತ್ಸವ ನಡೆಯಿತು.

ದಿನಾಂಕ 19–12–81 ರಂದು ಸಾಹಿತ್ಯೋ–ತ್ಸವವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಧಿಕ ನಿರ್ದೇಶಕ ನ. ಸಾ. ಕಟಾವಿ ಅವರು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಮಾತ ನಾಡಿದ ಗುಲ್ಬರ್ಗ ವಿಶ್ವವಿದ್ಯಾನಿಲಯದ ಉಪ ಕುಲಪತಿ ಜಯತೀರ್ಥ ರಾಜಪುರೋಹಿತರು ದಾಸಸಾಹಿತ್ಯದಲ್ಲಿ ತೀವ್ರತರ ಸಂಶೋಧನೆ ಪ್ರಕಟನೆ ಪ್ರಚಾರಗಳು ಎಂದಿಗಿಂತ ಇಂದು ಹೆಚ್ಚು ತುರ್ತಾಗಿ ನಡೆಯಬೇಕಾದ ಕೆಲಸವೆಂದು ಅಭಿಪ್ರಾಯ ಪಟ್ಟರು.

ದಿನಾಂಕ 20 ರಂದು ಬೆಳಗ್ಗೆ ದಾಸಸಾಹಿತ್ಯ ಪ್ರಾಜೆಕ್ಟಿನ ವಸ್ತು ಪ್ರದರ್ಶನವನ್ನು ವಿಶೇಷ ಜಿಲ್ಲಾಧಿಕಾರಿ ಬೀರಯ್ಯನವರು ಉದ್ಘಾಟಿಸಿದರು. ಹರಿದಾಸ ಸಾಹಿತ್ಯದಲ್ಲಿನ ಸೃಷ್ಟಿ ಪ್ರಕರಣ ಚಿತ್ರಗಳು, ಹರಿದಾಸರುಗಳ ವಾಸಸ್ಥಳ, ಬಳಕೆಯ ವಸ್ತುಗಳು, ಆರಾಧ್ಯದೈವಗಳ ಈ ಚಿತ್ರಪ್ರದರ್ಶನ ಅತ್ಯಂತ ಜನಪ್ರಿಯವಾಗಿ ರಾತ್ರಿ ಬಹುಹೊತ್ತಿನವರೆಗೆ ಜನರನ್ನು ಆಕರ್ಷಿಸುತ್ತಿದ್ದಿತು.

ಜ ಯ ತೀ ರ್ಥ ರಾಜಪುರೋಹಿತರ ಅಧ್ಯಕ್ಷತೆಯಲ್ಲಿ ಬಿ. ಬಿ. ಹೆಂಡಿ ಹಾಗೂ ಆರ್. ವೈ. ಧಾರ್ವಾಡಕರ್ ಅವರು ಅಂದಿನ

ದಾಸಸಾಹಿತ್ಯ ವಸ್ತು ಪ್ರದರ್ಶನ ಮೂರು ಚಿತ್ರಗಳು

ಮಾತನಾಡುತ್ತಿರುವ: ವಸಂತಕುಷ್ಟಗಿ, ಭಾಗೋಜಿ, ಆರ್. ವೈ. ಧಾರ್ವಾಡಕರ್, ವಿ. ಪ್ರಭಂಜನ ಅವರುಗಳು.



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡ.
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ.
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

ವಿಚಾರ ಗೋಷ್ಠಿಯ ಪ್ರಬಂಧಗಳನ್ನು ಮಂಡಿಸಿದರು. ಅಂದು ಸಂಜೆ ಸಾಂಸ್ಕೃತಿಕ ಕಾರ್ಯಕ್ರಮಗಳೂ, ರಾತ್ರಿ ಶ್ರೀ ಗೋಪಾಲದಾಸರಿಂದ ಹರಿಕಥೆಯೂ ನಡೆದವು.

20–12–81 ರ ಬೆಳಗ್ಗೆ ಶ್ರೀ ಬಿ. ಬಿ. ಹೆಂಡಿ ಅವರ ಅಧ್ಯಕ್ಷತೆಯಲ್ಲಿ ಶ್ರೀಅದ್ಯರಂಗನಾಚಾರ್ಯರ, ಶ್ರೀಗುರುಲಿಂಗಕಾಪಸೆ, ಶ್ರೀ ವಸಂತ ಕುಷ್ಟಗಿ, ಶ್ರೀಪಾವರಾವ್ ಜೋಷಿ ಅವರುಗಳಿಂದ ಪ್ರಬಂಧ ಮಂಡನೆಯಾಗಿ ವಿಚಾರಗೋಷ್ಠಿ ನಡೆಯಿತು. ಅಂದಿನ ಸಂಜೆ ಶ್ರೀ ಪಿ. ಕೆ ಭಾಗೋಜಿ, ಶ್ರೀ ಎಸ್. ಕೆ. ಹಾವನೂರ್, ವಿ. ಆರ್. ಪ್ರಭಂಜನ ಅವರುಗಳು ಮಾತನಾಡಿದರು. ಶ್ರೀ ಸಿದ್ಧರಾಮ ಜಂಬಲದಿನ್ನಿ ಅವರ ಹಿಂದೂಸ್ತಾನೀ ಸಂಗೀತವೂ ಶ್ರೀ ಗೋಪಾಲದಾಸರ ಹರಿಕಥೆಯೂ ಶ್ರೀಮತಿ ಗಂಗೂಬಾಯಿ ಹಾನಗಲ್ ಅವರ ಅಧ್ಯಕ್ಷತೆಯಲ್ಲಿ ನಡೆದವು.

21–12–81 ರಂದು ಸಂಜೆ ಶ್ರೀ ಕೆ. ಜಯಾಚಾರ್ಯರ ಅಧ್ಯಕ್ಷತೆಯಲ್ಲಿ ಶ್ರೀ ಕೆ. ಅಪ್ಪಣ್ಣಾಚಾರ್ಯರು ಪಾರಿತೋಷಿಕ ವಿತರಣೆ ಮಾಡಿದರು. ಜಾಗೀರ್ದಾರ್ ಹಾಗೂ ವಿ. ಆರ್. ಪ್ರಭಂಜನ ಅವರುಗಳು ಸಮಾರೋಪ ಭಾಷಣ ಮಾಡಿದರು. ರಾತ್ರಿ ಶ್ರೀಮತಿ ಕೃಷ್ಣಾ ಹಾನಗಲ್ ಅವರ ಸಂಗೀತ ನಡೆಯಿತು.

## ವಾದಿರಾಜ ಕನಕದಾಸ ಸಾಹಿತ್ಯ ಉತ್ಸವ

ಕಳೆದ ವರ್ಷದ ಡಿಸೆಂಬರ್ ಮಧ್ಯಭಾಗದಲ್ಲಿ ಉಡುಪಿಯಲ್ಲಿ ಶ್ರೀ ವಾದಿರಾಜ ಕನಕದಾಸ ಸಂಗೀತೋತ್ಸವವು ಮೂರುದಿನಗಳ ಕಾಲ ವಿಜೃಂಭಣೆಯಿಂದ ನಡೆಯಿತು. ಕರ್ನಾಟಕ ಸರ್ಕಾರದ ಸಂಗೀತ ನೃತ್ಯ ಅಕಾಡೆಮಿ, ತಿರುಪತಿಯ ದಾಸಸಾಹಿತ್ಯ ಪ್ರಾಜೆಕ್ಟ್, ಉಡುಪಿಯ ಶ್ರೀವಾದಿರಾಜ ಕನಕದಾಸ ಮಹೋತ್ಸವ ಸಮಿತಿ, ಮಹಾತ್ಮಾ ಗಾಂಧಿ ಮೆಮೋರಿಯಲ್ ಕಾಲೇಜುಗಳ ಸಂಯುಕ್ತ ಆಶ್ರಯದಲ್ಲಿ ಎಂ.ಜಿ.ಎಂ. ಕಾಲೇಜಿನ ಮುದ್ದಣ ಮಂಟಪದಲ್ಲಿ 11, 12, 13, ರಂದು ನಡೆದ ಈ ಉತ್ಸವದಲ್ಲಿ ಸಂಗೀತ ಸಾಹಿತ್ಯ ಸಭೆಗಳೂ ಸ್ಪರ್ಧೆಗಳೂ ನಡೆದವು

ಡಿಸೆಂಬರ್ 11 ರಂದು ಶುಕ್ರವಾರ ಕರ್ನಾಟಕದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯ ನಿರ್ದೇಶಕ ಶ್ರೀ ಕೆ. ಜಯಾಚಾರ್ಯರ ಅಧ್ಯಕ್ಷತೆಯಲ್ಲಿ ಎಡನೀರು ಮಠದ ಸ್ವಾಮಿ ಶ್ರೀ ಕೇಶವಾನಂದ ಭಾರತಿಯವರು ಉದ್ಘಾಟಿಸಿದ ಸಮಾರಂಭದಲ್ಲಿ



ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ವೇದಾಶೀರ್ವಚನ ಪಡೆಯುತ್ತಿರುವ ಶ್ರೀ ಗುಂಡೂರಾವ್.

## ತಿರುಮಲೆಯಲ್ಲಿ ಗುಂಡೂರಾವ್

ಕರ್ನಾಟಕದ ಮುಖ್ಯಮಂತ್ರಿ ಶ್ರೀ ಗುಂಡೂರಾಯರು ತಿರುಪತಿಗೆ ಬೇಟಿಕೊಟ್ಟು ದಿನಾಂಕ 20–1–82 ರಂದು ಸಂಜೆ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದರ್ಶನ ಪಡೆದರು. ತಿರುಚಾನೂರು ಅಲಮೇಲು ಮಂಗಾಪುರವನ್ನು ದರ್ಶಿಸಿದ ಮುಖ್ಯಮಂತ್ರಿಗಳು 21 ರ ಬೆಳಗ್ಗೆ ಸ್ವಾಮಿಯವರ ಸುಪ್ರಭಾತ ಸೇವೆಯಲ್ಲಿ ಪಾಲ್ಗೊಂಡು ದೇವಸ್ಥಾನದ ಯಾತ್ರಿಕೋಪಯೋಗಿ ಕಾರ್ಯಕ್ರಮಗಳ ಉತ್ಕರ್ಷಕ್ಕೆ ತಮ್ಮ ಹರ್ಷವನ್ನು ವ್ಯಕ್ತಪಡಿಸಿದರು. ದೇವಸ್ಥಾನದ ಭೋಜನಶಾಲೆಯನ್ನು ಸಂದರ್ಶಿಸಿದ ಅವರು ತಿ.ತಿ.ದೇ. ಕ್ಯಾಂಟೀನ್ ವಿಶೇಷಾಧಿಕಾರಿ ದಿ॥ ಎನ್.ಎಸ್.ಎಸ್. ಅಯ್ಯಂಗಾರ್ಯರ ಮೂಲಕ ಕ್ಯಾಂಟೀನ್‌ನ ಆಧುನಿಕ ಯಂತ್ರೋಪಕರಣಗಳನ್ನು ಪರಿಶೀಲಿಸಿದರು.



ತಿರುಮಲೆಯ ತಿ. ತಿ. ದೇ ಕ್ಯಾಂಟೀನ್ ಕಾಂಪ್ಲೆಕ್ಸ್ ವಿಶೇಷಾಧಿಕಾರಿ ದಿ॥ ಎನ್. ಎಸ್. ಎಚ್. ಅಯ್ಯಂಗಾರ್ ಅವರೊಡನೆ ಮುಖ್ಯ ಮಂತ್ರಿಗಳು.



ಬಲದಿಂದ ಎಡಕ್ಕೆ ಕುಳಿತಿರುವವರು : ಟಿ. ಎನ್. ನಾಗರತ್ನ, ಜಿ. ಕೆ ನಾರಾಯಣ ಪ್ರಸಾದ್, ಬನ್ನಂಜೆ ಗೋವಿಂದಾಚಾರ್ಯ, ಎಂ. ರಾಜಗೋಪಾಲಾಚಾರ್ಯ, ಹೊ. ಸೀತಾರಾಮಾಚಾರ್ಯ, ಹಾಗೂ ಗುಪ್ತ ಮಾತನಾಡುತ್ತಿರುವವರು ಪಿ. ರಾಮಭಟ್.

ರಾಧಾ–ಜಯಲಕ್ಷ್ಮಿ ಹಾಗೂ ಸಂಗಡಿಗರು, ಎಂ. ಪ್ರಭಾಕರ ಮತ್ತು ಸಂಗಡಿಗರು ತಮ್ಮ ಸಂಗೀತ ಸುಧೆಯಿಂದ ಜನಸ್ತೋಮವನ್ನು ರಂಜಿಸಿದರು.

ಡಿಸೆಂಬರ್ 12 ರಂದು ಮಕ್ಕಳಿಗೆ, ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ಸಂಗೀತ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. ಸಂಜೆ ವಿದ್ವಾನ್ ಜಿ ವಿ. ನಾರಾಯಣ ಜಕಾಳೆ, ಟಿ. ಶಾರದಾ, ಟಿ ಶಚೀದೇವಿ ಅವರ ಸಂಗೀತ ಕಾರ್ಯಕ್ರಮಗಳ ನಂತರ ಪಂಡಿತ ಶ್ರೀ ಬಸವರಾಜ ರಾಜಗುರು ಅವರ ಹಿಂದೂಸ್ತಾನಿ ಸಂಗೀತ ಕಚೇರಿ ನಡೆಯಿತು.

ಡಿಸೆಂಬರ್ 13ರ ಬೆಳಗ್ಗೆ ದಾಸಸಾಹಿತ್ಯ ಪ್ರಾಜೆಕ್ಟ್‌ನ ನೆರವಿನಿಂದ ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯರ ಅಧ್ಯಕ್ಷತೆಯಲ್ಲಿ ವಿಚಾರಗೋಷ್ಠಿ ನಡೆಯಿತು. ಇದರಲ್ಲಿ ಭಾಗವಹಿಸಿದ ವಿದ್ವಾಂಸ ವಿಮರ್ಶಕರೆಂದರೆ ಡಾ॥ ಟಿ. ಎನ್. ನಾಗರತ್ನ; ಪ್ರೊ॥ ಎಂ. ರಾಜಗೋಪಾಲಾಚಾರ್ಯ, ಡಾ॥ ಹೊಸಬೆಟ್ಟು ಸೀತಾರಾಮಾಚಾರ್ಯ, ಡಾ॥ ಪಿ. ರಾಮಭಟ್ಟ ಹಾಗೂ ಕೆ. ಜಿ. ನಾರಾಯಣ ಪ್ರಸಾದ್ ಅವರುಗಳು.

ಅಂದಿನ ರಾತ್ರಿ ನಡೆದ ಸಮಾರೋಪ ಸಮಾರಂಭದಲ್ಲಿ ಶ್ರೀ ಕೆ. ಅಪ್ಪಣ್ಣಾಚಾರ್ಯ ಅಧ್ಯಕ್ಷತೆಯಲ್ಲಿ ಡಾ॥ ಟಿ. ಎನ್. ನಾಗರತ್ನ ಅವರು ಸಮಾರೋಪ ಭಾಷಣವನ್ನು ಮಾಡಿದರು. ನಂತರ ಪ್ರೊ. ಕೆ. ವಿ. ನಾರಾಯಣಸ್ವಾಮಿ ಮತ್ತು ಬೃಂದದವರಿಂದ ಸಂಗೀತ ನಡೆಯಿತು.



# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

ಆರ್ಜಿತ ಕಲ್ಯಾಣೋತ್ಸವ ಮಾಡಿಸುವ ಆಸಕ್ತ ಭಕ್ತರಿಗೆ ಮತ್ತೊಂದು ಸುವಾರ್ತೆ ಎಂದರೆ; ಕಲ್ಯಾಣೋತ್ಸವವನ್ನು ರೂ. 500–00 ಶುಲ್ಕದಲ್ಲಿ ನಡೆಸುವ ಕ್ರಮವನ್ನು ಜಾರಿಗೆ ತರಲಾಗಿರುವುದು. ಇದರಲ್ಲಿ ಗೃಹಸ್ಥರನ್ನೂ ಸೇರಿಸಿದಂತೆ ಆರು ಜನರಿಗೆ ಮಾತ್ರ ಪ್ರವೇಶ. ಲಡ್ಡು ವಡೆಗಳ ಪ್ರಸಾದ ನೀಡಿಕೆ ಇಲ್ಲ. ಮಿಕ್ಕಂತೆ ಎಲ್ಲವೂ ರೂ. 2000–00 ಕಲ್ಯಾಣೋತ್ಸವದಂತೆಯೇ.

ಆಸ್ತಿಕ ಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಳ್ಳಬೇಕೆಂದು ವಿನಂತಿ.

**ತಿ. ತಿ. ದೇ.**

ಮುಂದಿನ ಸಂಚಿಕೆಯಲ್ಲಿ;

**ಸಪ್ತಗಿರಿ — ಮಾರ್ಚ್ 1982**

**ಸೂರ್ಯನಮಸ್ಕಾರ**
–ಕೆ. ಕೇಶವ ಮೂರ್ತಿ

**ವಾದಿರಾಜರು**
–ಡಾ॥ ಟಿ. ಎನ್. ನಾಗರತ್ನ

**ತ್ಯಾಗರಾಜರು**
–ಎಂ. ಆರ್ ಜಯಶ್ರೀ

**ಮೇಲು ಕೋಟೆ**
–ಮುಕುಂದ ಪುರೋಹಿತ

**ಸತಿನಳಾಯಿನಿ**
–ವಿಮಲಾ ರಾಘವೇಂದ್ರ

**ಜಪಾನಿನಲ್ಲಿ ಹಿಂದೂ ದೇವಾಲಯಗಳು**
–ರಾ. ಮುರಳಿ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು. ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | |
|---|---|
| ವಿಶೇಷ ಪ್ರವೇಶ (ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸಂತಿಯಸಾಲಿನಲ್ಲಿ ಸೇರುವಿಕೆ) | ರೂ 25–00 |

### ಸೇವೆಗಳು

| | | |
|---|---|---|
| 1 | ಆಮಂತ್ರಣೋತ್ಸವ[1] | ರೂ 400 |
| 2 | ಅಭಿಷೇಕ* | ರೂ 500 |
| 3. | ಗಂಬುರ* | ರೂ 300 |
| 4. | ಪುನುಗು* | ರೂ 200 |
| 5 | ಜಾವ್ವಾ* | ರೂ 100 |
| 6 | ಕಸ್ತೂರಿ* | ರೂ 100 |
| 7. | ಸಹಸ್ರಕಲಶಾಭಿಷೇಕ | ರೂ 3000 |
| 8. | ತಿರುಪ್ಪಾವಡಾ[2] | ರೂ 6000 |
| 9. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 10 | ಮುಕುರ ಮಂಟಪದಲ್ಲಿ ಡೋಲೋತ್ಸವ[2] | ರೂ 1500 |
| 11. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ

2 ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ: **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ

ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ 75–00 |
| ಟಿ.ಬಿ ಸಿ ಒಳಗಿನ ಕಾಟೇಜುಗಳು | ,, | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ ಸಿ ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ 9 | ,, | ರೂ 50–00 |
| ಎ ಟಿ ಸಿ. ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ ಟಿ.ಡಿ. ತಿರುಮಲೆ

### ತಿರುಪತಿ

| | | |
|---|---|---|
| ಶ್ರೀನಿವಾಸ ಸತ್ರ | ಎರಡು ಹಾಸಿಗೆಗಳ ಕೋಣೆ | ರೂ 12–00 |
| | ನಾಲ್ಕು ,, | ರೂ 15–00 |
| | ಒಂದು ,, | ರೂ 10–00 |
| ಶ್ರೀ ಪದ್ಮಾವತಿ ಅತಿಥಿಗೃಹ | | |
| | ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 40–00 |
| | ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | | |
| | ಎರಡು ಹಾಸಿಗೆಗಳ ಕೋಣೆ | ರೂ 16–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.

Regd No. H/TRP 14
ಬಿಡಿಪ್ರತಿ ಬೆಲೆ ರೂ 1-00

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

## ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.

## ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.

## ದೃಢವಾದ ತಾತ್ವಿಕ ತಳಹದಿಯುನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.

## ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

## ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.

ಓಂ ಶ್ರೀ ವೆಂಕಟೇಶಾಯ ನಮಃ
ಓಂ ನಮೋ ಭಗವತೇ ವಾಸುದೇವಾಯ
ಓಂ ನಮೋ ನಾರಾಯಣಾಯ
ಓಂ ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ.